CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ನವೆಂಬರ್ ೨೫, ೨೦೦೪ (ಮಾರ್ಗಶಿರ ೪, ಶಕ ವರ್ಷ ೧೯೨೬) | ಸಂಚಿಕೆ ೪೭ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ ಸಂಖ್ಯೆ:ಎಲ್.ಆರ್.ಎಫ್/ಸಿಆರ್-168/03-04. ದಿನಾಂಕ: 21ನೇ ಅಕ್ಟೋಬರ್ 2004**

**ವಿಷಯ:** ರಾಜುಕ್ಷತ್ರಿಯ ಎಜುಕೇಷನ್ ಟ್ರಸ್ಟ್, ನಂ.14, ಸ್ಯಾಂಕಿ ರಸ್ತೆ, ಬೆಂಗಳೂರು 560 052 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ, ಸರ್ವೆ ನಂ. 214/2 ರಲ್ಲಿ 0.39 ಗುಂಟೆ ಜಮೀನನ್ನು ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಕ್ರಯಕ್ಕೆ ಪಡೆಯಲು ಅನುಮತಿ ಕೋರಿರುವ ಬಗ್ಗೆ.

ರಾಜುಕ್ಷತ್ರಿಯ ಎಜುಕೇಷನಲ್ ಟ್ರಸ್ಟ್, ನಂ.14, ಸ್ಯಾಂಕಿ ರಸ್ತೆ, ಬೆಂಗಳೂರು 560 052 ರವರು ಬೆಂಗಳೂರು ಉತ್ತರ(ಅಪರ) ತಾಲ್ಲೂಕು ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ, ಸರ್ವೆ ನಂ. 214/2 ರಲ್ಲಿ 0.39 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ 15 ಎ ಮತ್ತು ನಮೂನೆ 15 ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪ ವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರ ಸಂ: ಎಲ್.ಆರ್.ಎಫ್:ಸಿ.ಆರ್:ಬಿ.ಎನ್.ಎ.1/04-05, ದಿನಾಂಕ: 22.9.2004 ರಲ್ಲಿ ಪ್ರಸ್ತಾಪಿತ ಗ್ರಾಮದ ಸರ್ವೆ ನಂಬರ್ 214/2 ರಲ್ಲಿ 0.39 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(1)(11)ರಡಿ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯ ಉಪನೋಂದಣಾಧಿಕಾರಿಗಳ ಕಛೇರಿ ಗಾಂಧೀನಗರ ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ: 6.9.1976 ರಂದು ನೋಂದಾಯಿಸಲ್ಪಟ್ಟಿದೆ. ಖಾತೇದಾರದಿಂದ ಜಮೀನು ಕ್ರಯಕ್ಕೆ ಪಡೆಯಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109(1)(11) ಮತ್ತು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 63, 79ಎ 79ಬಿ ಅಥವಾ 80 ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಜಾಲ ಹೋಬಳಿ, ಕಟ್ಟಿಗೇನಹಳ್ಳಿ ಗ್ರಾಮದ, ಸರ್ವೆ ನಂ. 214/2 ರಲ್ಲಿ 0.39 ಗುಂಟೆ ಜಮೀನನ್ನು ರಾಜುಕ್ಷತ್ರಿಯ ಎಜುಕೇಷನಲ್ ಟ್ರಸ್ಟ್, ನಂ.14, ಸ್ಯಾಂಕಿ ರಸ್ತೆ, ಬೆಂಗಳೂರು-560 052 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109(1) (11) ರಡಿ ಹಾಗೂ ಸರ್ಕಾರದ ಅಧಿಸೂಚನೆ ತಿದ್ದುಪಡಿ ಸಂ: ಶಾಇ 47 ಶಾಸನ 2001 ಬೆಂಗಳೂರು ದಿ: 23.4.2003ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯೂನಿಟ್‌ಗಳಿದ್ದು ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಪ್ರಸ್ತಾಪಿತ ಜಮೀನು ಖರೀದಿಸಲು ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956 ಕಲಂ 3 ರಲ್ಲಿ ಹೇಳಿರುವಂತೆ, ಶೇಕಡ 55 ಪೈಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ಬೇರೆ ರೀತಿ ವರ್ಗಾವಣೆ ಮಾಡಬಾರದು.

3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ವಿದ್ಯಾ ಸಂಸ್ಥೆಗಳಿಗೆ ಉಪಯೋಗಿಸಿಕೊಳ್ಳಲು ಭೂ ಉಪಯೋಗದ ಅವಶ್ಯಕತೆ ಇದ್ದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಭೂ ಬದಲಾವಣೆ ಮಾಡಿಕೊಳ್ಳತಕ್ಕದ್ದು.
4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿಡಿಪಿ, ಒಡಿಪಿ ಹಾಗೂ ಹಸಿರುವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7) ಈ ಅನುಮತಿಯನ್ನು ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಗಳಡಿ ಅಗತ್ಯತ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಪಿ.ಆರ್. 1546 ವಿಶೇಷ ಜಿಲ್ಲಾಧಿಕಾರಿಗಳು (ಕಂ) ಬೆಂಗಳೂರು ಜಿಲ್ಲೆ.

**Office of the Asst. Commr. of Comml. Taxes, Addl. Dist.IV Circle, B'lore**
**Notification No.ACCT.ADDL.DIST.IV. 04-05, Dated:16th October 2004**
**(Missing of 'C' Declaration Form)**

In pursuance of the provisions contained in Rule 6(e) of the CST Act (Karnataka Rules 1957), it is notified for general information that the following declaration forms - C referred to Sub-Section (4) of Section 8 of CST Act 1956, is declared to be obsolete and invalid for the reasons that the C declaration forms were lost.

| | | | |
|---|---|---|---|
| 1. | Name of the office which has issued the C declaration forms | : | Assistant Commissioner of Comml. Taxes, Addl. Dist.IV Circle, B'lore. |
| 2. | Number of C declaration forms lost | : | mm 029021. |
| 3. | Date on which the C forms were lost | : | 10-08-2004. |
| 4. | Name and Address of the dealer to whom the C Forms were issued by the Department | : | M/s V.R. Automats, No.324, Hosur Main Road, Madiwala, Bangalore has lost the C Forms in transit. |

P.R. 1547 Asst. Commr. of Comml. Taxes, Addl. Dist.IV Circle, Bangalore.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**
**ಪ್ರ.ಸಂ.ಕಾಅದಾ:ಕಾನಪ:ಸಿಆರ್-300/04, ದಿನಾಂಕ: 30ನೇ ಅಕ್ಟೋಬರ್ 2004**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಯಲ್ಲಪ್ಪ ಬಿನ್ ರಾಮಪ್ಪ, (2) ಜಯಮ್ಮ ಕೋಂ ಯಲ್ಲಪ್ಪ, (3) ಕುಬೇರ ಬಿನ್ ಯಲ್ಲಪ್ಪ (4) ರೇವಣ್ಣ ಸಿದ್ದಯ್ಯ ಬಿನ್ ಯಲ್ಲಪ್ಪ **ವಾಸ:** ಜಂಪೇನಹಳ್ಳಿ ಗ್ರಾಮ, ದಾವಣಗೆರೆ ತಾಲ್ಲೂಕು. | | 1. ಮುರುಗೇಂದ್ರ ನಾಯ್ಕ ಬಿನ್ ಪಾಟೀಲ್ ತಾವರಯ್ಯ ನಾಯ್ಕ ಟ್ರಾಕ್ಟರ್ ಮಾಲೀಕರು, ನಂ. ಕೆ.ಎ.17/470-471 ಜಂಪೇನಹಳ್ಳಿ ಗ್ರಾಮ ದಾವಣಗೆರೆ ತಾಲ್ಲೂಕು. 2. ದಿ ಜನರಲ್ ಮ್ಯಾನೇಜರ್, ದಿ. ಓರಿಯೆಂಟಲ್ ಇನ್ಸೂರೆನ್ಸ್ ಕಂ. ಲಿ., ದಾವಣಗೆರೆ. |

**ಪ್ರಕಟಣೆ**

ಶ್ರೀ:ಶ್ರೀಮತಿ ಯಲ್ಲಪ್ಪ, ಜಯಮ್ಮ ಕುಬೇರ, ರೇವಣ್ಣ ಸಿದ್ದಯ್ಯ, ಇವರುಗಳಾದ ತಾವು ಮೃತ ಕರಿಬಸವರಾಜು ಇವರ ತಂದೆ ತಾಯಿ ಮತ್ತು ಸಹೋದರರು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕರಿಬಸವರಾಜು ರವರು ಒಂದನೇ ಪ್ರತಿವಾದಿಗಳಾದ ಮುರುಗೇಂದ್ರ ನಾಯ್ಕ ಇವರ ಟ್ರಾಕ್ಟರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1548 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**
**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:ಎಫ್/329:2004, ದಿನಾಂಕ: 2ನೇ ನವೆಂಬರ್ 2004**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಚನ್ನಮ್ಮ ಗಂಡ ಅಜ್ಜಪ್ಪ ರಾಟೋಡ ಸಾ।। ಅಂಜೂರ ಕ್ಯಾಂಪ್ ಪೊ।। ಮುಷ್ಟೂರ ತಾ।।ಗಂಗಾವತಿ 2) ಯಮನಪ್ಪ ತಂದೆ ಅಜ್ಜಪ್ಪ, (3) ಮಂಜವ್ವ ತಂದೆ ಅಜ್ಜಪ್ಪ | | 1. ಶ್ರೀ ಬಸವರಾಜ ತಂದೆ ಯಂಕಪ್ಪ ಪೆದ್ದಲ ಸಾ।। ಬೂದಗುಂಪಾ ತಾ।।ಜಿ।।ಕೊಪ್ಪಳ. ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಬಳ್ಳಾರಿ. |

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ:ಶ್ರೀ:ಶ್ರೀಮತಿ: ಅಜ್ಜಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:17.6.2001 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ:ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ:ಅಜ್ಜಪ್ಪ ರವರ ವಾರಸುದಾರರುಗಳಾದ ಶ್ರೀ:ಶ್ರೀಮತಿ: ಚನ್ನಮ್ಮ ಹಾಗೂ 2 ಜನರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 1549 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯದಲ್ಲಿ, ಕೊಪ್ಪಳ**
**ಪ್ರಕರಣ ಸಂಖ್ಯೆ:ಕಾಅಕೊ:ಕಾನಪ:ಎಫ್/330:2004, ದಿನಾಂಕ: 2ನೇ ನವೆಂಬರ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಗುಡಾಲು ಜಯಲಕ್ಷ್ಮೀ ಗಂಡ ವೆಂಕಟೇಶಲು ಶ್ರೀರಾಮನಗರ ಗಂಗಾವತಿ
2. ಶ್ರೀಮತಿ ಸಾವಿತ್ರಿ ಗಂಡ ವೆಂಕಟೇಶಲು
3. ರವಿತೇಜ ತಂದೆ ವೆಂಕಟೇಶಲು
4. ಶಿಲ್ಪಾ ತಂದೆ ವೆಂಕಟೇಶಲು
5. ಪವನ್‌ಕುಮಾರ್ ತಂದೆ ವೆಂಕಟೇಶಲು
6. ಗುಡಾಲು ವೆಂಕಣ್ಣ ತಂದೆ ವೀರಣ್ಣ ಶ್ರೀರಾಮನಗರ ಗಂಗಾವತಿ.

ಪ್ರತಿವಾದಿಗಳು:

1. ಶ್ರೀಮತಿ ಸಾಮ್ರಾಜ್ಯ ಲಕ್ಷ್ಮೀ ಗಂಡ ರಾಮಾಬಾಬು ಸಾ॥ ಅಯೋಧ್ಯ ತಾ॥ಗಂಗಾವತಿ.
2. ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಆಫ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಬಳ್ಳಾರಿ.

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ:ಗಾಯ:ಶ್ರೀ: ವೆಂಕಟೇಶಲು ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:15.7.2004 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ:ಗಾಯ: ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರಡಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡ ಮೃತ:ಗಾಯ: ವೆಂಕಟೇಶಲು ರವರ ವಾರಸುದಾರರುಗಳಾದ ಶ್ರೀ:ಶ್ರೀಮತಿ: ಗುಡಾಲು ಜಯಲಕ್ಷ್ಮಿ ಹಾಗೂ ಇತರರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ಅಥವಾ ತಾವೇನಾದರೂ ಅಥವಾ ತಾವೂ ಸಹ ಮೃತ:ಗಾಯ: ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನದೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದ್ರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿಗಳು ಬಾರದಿದ್ದಲ್ಲಿ ಸದ್ರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಪಿ.ಆರ್. 1550 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**
**ಸಂಖ್ಯೆ: ಕಾಅತು:ಕಾಪಕಾ:ಸಿಆರ್-87/04, ದಿನಾಂಕ: 12ನೇ ಅಕ್ಟೋಬರ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಚಂದ್ರಭಾಗ ಸೋನ್ಯಬಾಪು ಥಾಂಬೆ W/o ಸೋನ್ಯಬಾಪು ಬಾಬುರಾವ್ ಥಾಂಬೆ ವಯಸ್ಸು, ಸುಮಾರು 42 ವರ್ಷ R/o ಚಂದ್ರಾಪುರ, ಹಾಸನಪುರ ಪೋಸ್ಟ್, ರಾಹತ್ ತಾಲ್ಲೂಕು ಅಹ್ಮದ್‌ನಗರ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.

ಪ್ರತಿವಾದಿಗಳು:

1. ಸಂದೀಪ್ B. ಥಾಂಬೆ MH-12-QA-9202 ಲಾರಿ ಮಾಲೀಕರು, R/o ಚಂದ್ರಾಪುರ, ಹಾಸನಪುರ ಪೋ, ರಾಹಾತ್ ತಾ॥ ಅಹ್ಮದ್ ನಗರ ಜಿಲ್ಲೆ, ಮಹಾರಾಷ್ಟ್ರರಾಜ್ಯ.
2. ದಿ ಓರಿಯೆಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ., ದಾದಾ ಜೋಶಿ ಬಿಲ್ಡಿಂಗ್, II ಫ್ಲೋರ್ ಶಿವಾಜಿ ಕ್ರಾಸ್ ರೋಡ್, ಶ್ರೀರಾಮಪುರ - 413709 ಮಹಾರಾಷ್ಟ್ರ ರಾಜ್ಯ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಚಂದ್ರಬಾಗ ಸೋನ್ಯಬಾಪುಥಾಂಬೆ ಇವರು ತಮ್ಮ ಮಗನಾದ ಲಕ್ಷ್ಮಣ ಸೋನ್ಯಬಾಪುಥಾಂಬೆ ಇವರು ಪ್ರತಿವಾದಿ-1 ಸಂದೀಪ್ ಥಾಂಬೆ ಇವರ ಲಾರಿ ನಂ: MH-12 QA 9202 ಲಾರಿಯಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 25.7.2004 ರಂದು ಉದ್ಯೋಗ ಸಮಯದಲ್ಲಿ ಕುಂಟೆಗೌಡನಹಳ್ಳಿ ಕಟಾವೀರನಹಳ್ಳಿ ಗೇಟ್ ಹತ್ತಿರ ಸಂಭವಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ

ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 1551 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್-88/04, ದಿನಾಂಕ: 12ನೇ ಅಕ್ಟೋಬರ್ 2004**

**ಅರ್ಜಿದಾರರು**

1. ಮಂಗಲ ನಾನಾಸಾಹೇಬ್ ನಾಯಕ್ @ ನಾಯಕ್ ಮಂಗಲ ಕೋಂ ನಾನಾಸಾಹೇಬ್ ಸುಖ್‌ದೇವ್ ನಾಯಕ್, 20 ವರ್ಷ
2. ಸೊನಾಲಿ ನಾನಾಸಾಹೇಬ್ ನಾಯಕ್ D/o ನಾನಾಸಾಹೇಬ್ ಸುಖದೇವ್‌ನಾಯಕ್ 7 ವರ್ಷ
3. ಸ್ವಪನಲಿ ನಾನಾಸಾಹೇಬ್ ನಾಯಕ್ D/o ನಾನಾಸಾಹೇಬ್ ಸುಖದೇವ್‌ನಾಯಕ್ 5 ವರ್ಷ
4. ಚಂದ್ರಕಾಂತ್ ನಾನಾಸಾಹೇಬ್ ನಾಯಕ್ S/o ನಾನಾಸಾಹೇಬ್ ಸುಖದೇವ್‌ನಾಯಕ್ 4 ವರ್ಷ
5. ನೀಲೇಶ್ ನಾನಾಸಾಹೇಬ್ ನಾಯಕ್ S/o ನಾನಾಸಾಹೇಬ್ ಸುಖದೇವ್‌ನಾಯಕ್ 2 ವರ್ಷ
   R/o ಚಂದ್ರಾಪುರ, ಹಾಸನಪುರ ಪೋಸ್ಟ್, ರಾಹಲ್ ತಾಲ್ಲೂಕು, ಅಹ್ಮದ್‌ನಗರ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.

**ವಿರುದ್ಧ**

**ಪ್ರತಿವಾದಿಗಳು**

1. ಸಂದೀಪ್ B. ಥಾಂಬೆ MH-12 QA 9202 ಲಾರಿ ಮಾಲೀಕರು R/o ಚಂದ್ರಪುರ, ಹಾಸನ ಪುರ ಪೋಸ್ಟ್ ರಾಹಲ್ ತಾಲ್ಲೂಕು, ಅಹ್ಮದ್‌ನಗರ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.
2. ದಿ ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ.ಲಿ., ದಾದಾ ಜೋಶಿ ಬಿಲ್ಡಿಂಗ್, II ಫ್ಲೋರ್, ಶಿವಾಜಿಕ್ರಾಸ್ ರೋಡ್, ಶ್ರೀರಾಮಪುರ - 413 709 ಮಹಾರಾಷ್ಟ್ರ ರಾಜ್ಯ

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಮಂಗಲನಾನಾಸಾಹೇಬ್ ನಾಯಕ್ @ ನಾಯಕ್‌ಮಂಗಲ ಇವರು ತಮ್ಮ ಪತಿಯಾದ ನಾನಾಸಾಹೇಬ್ ಸುಖದೇವ್ ನಾಯಕ್ ಇವರು ಪ್ರತಿವಾದಿ-1 ಸಂದೀಪ್ ಡಿ-ಥಾಂಬೆ ಇವರ ಲಾರಿ ನಂ: MH-12/Q9202 ರಲ್ಲಿ ಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 25.7.2004 ರಂದು ಉದ್ಯೋಗ ಸಮಯದಲ್ಲಿ ಕುಂಟೆಗೌಡನಹಳ್ಳಿ ಮತ್ತು ಕಟಾವೀರನಹಳ್ಳಿ ಗೇಟ್ ಹತ್ತಿರ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೆ ಇದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 1552 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್-89/04, ದಿನಾಂಕ: 11ನೇ ಅಕ್ಟೋಬರ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಲಾರ್ಸನ್ ಅಂಡ್ ಟರ್ಬೋ ಲಿ., ಇ ಸಿ ಸಿ ಡಿವಿಜನ್, ತುಮಕೂರು
ಶಿರಾ ಫೋರ್‌ಲೇನ್ ಪ್ರಾಜೆಕ್ಟ್, ಬೆಳ್ಳಾವಿ ಕ್ರಾಸ್, ತುಮಕೂರು

**ಪ್ರಕಟಣೆ**

ಮೃತ ಸುಜೀತ್ ಕುಮಾರ್ ಕೌಶಲ್, ಅವರು ಪ್ರತಿವಾದಿ ಸಂಸ್ಥೆಯಲ್ಲಿ ಕಾರ್ಮಿಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕರ್ತವ್ಯದ ವೇಳೆಯಲ್ಲಿ ಅಪಘಾತಹೊಂದಿ ದಿನಾಂಕ: 8-7-2004 ರಂದು ಮೃತಪಟ್ಟಿರುವುದಾಗಿ ತಿಳಿಸಿ, ಈ ಸಂಬಂಧ ಪ್ರತಿವಾದಿಗಳು ಪರಿಹಾರ ಮೊತ್ತ ರೂ.3,84,280-00 ಗಳನ್ನು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಜಮೆ ಮಾಡಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಪಿ.ಆರ್. 1553 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ, ತುಮಕೂರು ಜಿಲ್ಲೆ, ತುಮಕೂರು.

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-43/2004**

**APPLICANTS:**

1. Saleema Begaum W/o Md. Shafi Age 20 years Occ Household R/o Now at Mailoor Dist Bidar & 2 others

**V/S**

**RESPONDENT**

1. Md. Yousuf 15.7.238/17 Aghapura Hyderabad.
2. New India Assurance Co & Ltd Hyderabad Through D.N.New India Assurance Co Ltd., Gulbarga.

**PROCLAMATION**

Smt Saleema Begum W/o Md. Shafi R/o Now at Mailoor Dist Bidar have/has filed application in this court claiming compensation stating that Late: Md. Shafi was working as Driver under the Respondent No.I he met with an accident arising out of and during the course of employment as a result he died on:5.4.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 1554 Commissioner for Workmen's Compensation, Bidar.

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-54/2004**

**APPLICANTS:**

1. Abdul Majeed S/o Abdul Samad Age 52 Years Occ: Nil, R/o Topgalli, Tq, Humnabad, Dist, Bidar, & 6 others

**V/S**

**RESPONDENT**

1. M/s Reliable Roadways Agency, Rep. by Md. Sohali Boje, R/o Aghapura, Hyderabad.
2. New India Assurance Co. Ltd., Hyderabad.

**PROCLAMATION**

Sri Abdul Majeed F/o Late Abdul Raheem R/o Now at Top Galli Tq Humnabad Dist Bidar have/has filed application in this court claiming compensation stating that Late: Abdul Raheem was working as Cleaner under the Respondent No.I he met with an accident arising out of and during the course of employment as a result he died on:30.5.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 1555 Commissioner for Workmen's Compensation, Bidar.

**IN THE COURT OF COMMISSIONER FOR WORKMEN'S COMPENSATION, BIDAR**

**No: LOB/WCA/Cr-55/2004**

**APPLICANTS:**

1. Sharada Bai W/o Late Babu Rao Hokkar, Age 25 years, Occ: Household, R/o Nawadgi, Dist Bidar & 3 others.

**V/S**

**RESPONDENT**

1. Abdul Waheed S/o Abdul Raheem, H.No. 8-9-458/A, New Housing Colony, Bidar.
2. National Insurance Co. Ltd., Bidar.

**PROCLAMATION**

Smt Sharda Bai W/o Babu Rao Hokkar R/o Nawadgi Dist Bidar have/has filed application in this court claiming compensation stating that Late: Babu Rao Hokker was working as Driver under the Respondent No.I he met with an accident arising out of and during the course of employment as a result he died on:11.1.2004.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

P.R. 1556 Commissioner for Workmen's Compensation, Bidar.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ:299:ಡಿಟಿಸಿಆರ್:2003-2004 ದಿನಾಂಕ: 29ನೇ ಅಕ್ಟೋಬರ್ 2004**

**ಉಪಸ್ಥಿತರು** : ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಪೊಲೀಸ್ ಉಪ ನಿರೀಕ್ಷಕರು,
ವಿಟ್ಲ ಪೊಲೀಸ್ ಠಾಣೆ, ವಿಟ್ಲ.

**ವಿರುದ್ಧ**

**ಆರೋಪಿಗಳು:**

1. ಪತ್ತು ಯಾನೆ ಮಹಮ್ಮದ್ ಪತ್ತು, ಬಿನ್: ಮುಸಫ್ ಕುಂಜ್ಞ ಒಕ್ಕೆತ್ತೂರು, ಕೊಡಂಗೆ ಮನೆ, ವಿಟ್ಲ ಕಸಬ ಗ್ರಾಮ, ಬಂಟ್ವಾಳ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 19-4-2004ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಪೊಲೀಸು ಉಪ ನಿರೀಕ್ಷಕರು, ವಿಟ್ಲ ಪೊಲೀಸು ಠಾಣೆ, ವಿಟ್ಲ ಹಾಗೂ ತಮ್ಮ ಸಿಬ್ಬಂದಿಯವರೊಂದಿಗೆ ತಮ್ಮ ಇಲಾಖಾ ಜೀಪಿನಲ್ಲಿ ಠಾಣೆಯಿಂದ ಹೊರಟು ವಿಟ್ಲ ಕಸಬ ಗ್ರಾಮದ ಒಕ್ಕೆತ್ತೂರು ಬ್ರಿಡ್ಜ್ ಬಳಿ ಪಂಚರೊಂದಿಗೆ ಹೊಂಚುಹಾಕುತ್ತಿರುವಾಗ ಸುಮಾರು ಮಧ್ಯಾಹ್ನ 2.00 ಗಂಟೆಗೆ ಕಲ್ಲಡ್ಕ ಕಡೆಯಿಂದ ಬೂದು ಬಣ್ಣದ ಮಾರುತಿ 800 ಕಾರು ಬರುತ್ತಿರುವುದನ್ನು ಕಂಡು ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರು ನಿಲ್ಲಿಸಲು ಸೂಚನೆ ನೀಡಿದಾಗ ಕಾರಿನ ಚಾಲಕ ಕಾರನ್ನು ನಿಲ್ಲಿಸಲು ನಿರಾಕರಿಸುತ್ತಿದ್ದಂತೆ ತಮ್ಮ ಇಲಾಖಾ ಜೀಪನ್ನು ರಸ್ತೆ ಮಧ್ಯದಲ್ಲಿ ನಿಲ್ಲಿಸಿ ಕಾರನ್ನು ತಡೆಗಟ್ಟಿ, ಕಾರಿನ ಚಾಲಕ ಕಾರಿನಿಂದ ಇಳಿದು ಓಡಲು ಪ್ರಯತ್ನಿಸಿದನು. ಸಿಬ್ಬಂದಿಯವರು ಕಾರಿನ ಚಾಲಕನನ್ನು ಹಿಡಿದು ಸದರಿ ಕಾರನ್ನು ಪರಿಶೀಲಿಸಿದಾಗ ಅದರಲ್ಲಿ 100 ಎಂಎಲ್‌ನ ಸಾರಾಯಿ ತುಂಬಿದ 450 ತೊಟ್ಟೆಗಳಿರುವ ಒಟ್ಟು 10 ಪಾಲಿಥೀನ್ ಬ್ಯಾಗ್‌ಗಳು ಕಂಡುಬಂದಿರುತ್ತದೆ. ಸದರಿ ಸಾರಾಯಿ ತೊಟ್ಟೆಗಳನ್ನು ಸಾಗಾಣಿಕೆ ಮಾಡಲು ಪರವಾನಿಗೆ ಇದೆಯೇ ಎಂದು ಚಾಲಕನನ್ನು ವಿಚಾರಿಸಿದಾಗ ಸಾರಾಯಿ ತೊಟ್ಟೆಗಳನ್ನು ಸಾಗಾಣಿಕೆ ಮಾಡಲು ತನ್ನ ಬಳಿ ಯಾವುದೇ ರಹದಾರಿ ಇಲ್ಲವೆಂದು ತಿಳಿಸಿರುತ್ತಾನೆ. ಆರೋಪಿ ಚಾಲಕನ ಹೆಸರು ಮತ್ತು ವಿಳಾಸ ಕೇಳಲಾಗಿ ಅವನು ಪುತ್ತು ಯಾನೆ ಮಹಮ್ಮದ್ ಪುತ್ತು ಬಿನ್: ಮುಸಫ್ ಕುಂಜ್ಞ, ಒಕ್ಕೆತ್ತೂರು ಕೊಡಂಗೆ ಮನೆ, ವಿಟ್ಲ, ಕಸಬ ಗ್ರಾಮ, ಬಂಟ್ವಾಳ ಎಂದು ತಿಳಿಸಿರುತ್ತಾರೆ. ಹಾಗೂ ಸದರಿ ಸಾರಾಯಿ ತೊಟ್ಟೆಗಳನ್ನು ಮಂಗಳೂರಿನ ವಾಸಿ ಉಜ್ಜೋಡಿ ಉದಯ ಎಂಬುವನಿಂದ ಪಡೆದು ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡಿರುವುದಾಗಿ ತಿಳಿಸಿರುತ್ತಾನೆ. ಅಕ್ರಮಕ್ಕೆ ಬಳಸಿದ ಮಾರುತಿ 800 ಕಾರು ಸಂ: ಕೆಎಲ್-14-ಡಿ-1692 ಇದರ ಚಾಸಿಸ್ ನಂ: ಎಸ್‌ಬಿ-3081 ಐಎನ್-1898077 ಮತ್ತು ಇಂಜಿನ್ ನಂ:ಎಫ್8ಬಿ-1 ಎನ್ 2535 493 ಆಗಿರುತ್ತದೆ. ಸದರಿ ಕಾರಿನಲ್ಲಿ ಒಟ್ಟು 10 ಪಾಲಿಥೀನ್ ಬ್ಯಾಗ್‌ಗಳಲ್ಲಿ 100 ಎಂಎಲ್‌ನ 450 ಸಾರಾಯಿ ತೊಟ್ಟೆಗಳಂತೆ ಒಟ್ಟು 4500 ಸಾರಾಯಿ ತೊಟ್ಟೆಗಳು ಇರುವುದು ಕಂಡುಬಂತು. ಸದರಿ ಸಾರಾಯಿ ತೊಟ್ಟೆಯಿಂದ ರಾಸಾಯನಿಕ ಪರೀಕ್ಷೆಗಾಗಿ ಒಟ್ಟು 10 ಸಾರಾಯಿ ತೊಟ್ಟೆಗಳನ್ನು ತೆಗೆದು ಅದಕ್ಕೆ ಬಿಳಿ ಬಟ್ಟೆಯನ್ನು ಸುತ್ತಿ ಹೊಲಿದು ಎಸ್‌ಹೆಚ್‌ಓ ಅರಗಿನಿಂದ ಸೀಲು ಮಾಡಿರುತ್ತಾರೆ. ಸದರಿ ಸೊತ್ತುಗಳನ್ನು ಪಂಚರ, ಸಿಬ್ಬಂದಿಯವರ ಆರೋಪಿಯವರ ವಿರುದ್ಧ ವಶಪಡಿಸಿಕೊಂಡು ಮಹಜರನ್ನು ಸ್ಥಳದಲ್ಲೆ ಬರೆದು ಆರೋಪಿಯ ವಿರುದ್ಧ ಮೊಕದ್ದಮೆ ಸಂ:46/2004 ದಿ: 19-4-2004 ರಂದು ಮೊಕದ್ದಮೆ ದಾಖಲಿಸಿಕೊಂಡು ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಪ್ರಾಧಿಕಾರದ ಆದೇಶದ ಮೇರೆಗೆ ಅಬಕಾರಿ ಉಪ ನಿರೀಕ್ಷಕರು, ವಿಟ್ಲ ಉಪ ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಪತ್ರ ಸಂಖ್ಯೆ: ಇಎಕ್ಸ್‌ಇ:ಬಿಎನ್‌ಟಿ:ಆರ್‌ಸಿಆರ್:41:03-04 ದಿನಾಂಕ: 19-10-04 ರ ತಮ್ಮ ತನಿಖಾ ವರದಿಯಲ್ಲಿ ವಿಟ್ಲ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು, ಸದರಿ ತಕ್ಷೀರಿನಲ್ಲಿ ಜಪ್ತಿ ಮಾಡಿದ ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರ ಪತ್ರ ಸಂ:ಇ533-10 ದಿ:30-9-2004 ರಲ್ಲಿ ಸಾರಾಯಿ ಸ್ಯಾಚೆಟ್‌ನ ತೀಕ್ಷ್ಣತೆಯು 85 ಡಿಗ್ರಿ ಇದ್ದು ವೀಕ್ ಲಿಕ್ಕರ್ ಎಂದು ದೃಢಪಟ್ಟಿರುವುದರಿಂದ ಸಾರಾಯಿ ತೊಟ್ಟೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶ ನೀಡಬೇಕೆಂದು ಹಾಗೂ ಜಪ್ತಿಪಡಿಸಿದ ಮಾರುತಿ 800 ಕಾರು ಸಂ: ಕೆಎಲ್-14 ಡಿ-1692ರ "ಬಿ" ಅಬ್‌ಸ್ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕಾಸರಗೋಡುರವರಿಂದ ಪಡೆದಿದ್ದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾಸರಗೋಡು ರವರು ನೀಡಿದ "ಬಿ" ಅಬ್‌ಸ್ಟ್ರಾಕ್ ವರದಿಯಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂ: ಕೆಎಲ್-14-ಡಿ1692 ಇದು "ಬಿ" ಅಬ್‌ಸ್ಟ್ರಾಕ್ಟ್ ವರದಿಯ ಪ್ರಕಾರ ಹಿರೋಹೊಂಡಾ ಮೊಟಾರು ಸೈಕಲ್ ಎಂದು ನಮೂದಿಸಿರುತ್ತಾರೆ. ಸದರಿ ಮಾರುತಿ 800 ಕಾರಿನ ನಂಬರು ನಕಲಿಯಾಗಿದ್ದು ಮಾರುತಿ ಕಾರಿನ ಚಾಸಿಸ್ ನಂಬರಿಗೂ ಸಾರಿಗೆ ಅಧಿಕಾರಿಗಳು ಸಲ್ಲಿಸಿದ ಬಿ ಅಬ್ ಸ್ಟ್ರಾಕ್ಟ್ ವರದಿಯಲ್ಲಿ ನೀಡಿದ ಚಾಸಿಸ್ ನಂ. ಮತ್ತು ಇಂಜಿನ್ ನಂಬರು ಒಂದಕ್ಕೊಂದು ತಾಳೆಯಾಗಿರುವುಲ್ಲ. ಸದ್ರಿ ವಶಪಡಿಸಿಕೊಳ್ಳಲಾಗಿರುವ ಮಾರುತಿ 800 ಕಾರಿಗೆ ದ್ವಿಚಕ್ರ ವಾಹನದ ನಕಲಿ ನಂಬರನ್ನು ಬಳಸಿರುವುದಾಗಿ ತಿಳಿದಿದೆ. ಆದುದರಿಂದ ವಶಪಡಿಸಿಕೊಂಡ ವಾಹನವನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಲ್ಲಿ ಅಪರಾಧಿಗಳು ಪತ್ತೆಯಾಗದಿದ್ದಲ್ಲಿ ಹಾಗೂ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿ ಒಂದು ತಿಂಗಳ ಒಳಗೆ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸ್ವತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿವೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ ಸದ್ರಿ ಸ್ವತ್ತುಗಳು ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳದ ವಸ್ತುಗಳಾಗಿದ್ದಲ್ಲಿ ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಮದ್ಯವನ್ನು ಸಾಗಣೆ ಮಾಡಲು ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ದಿ: 19.4.2004 ರಂದು ಆರೋಪಿಗಳು 450 ಲೀಟರು ಸಾರಾಯಿಯನ್ನು 100 ಮಿಲಿಯ 4500 ಸಾರಾಯಿ ಸ್ಯಾಚೀಟುಗಳನ್ನು ಅಕ್ರಮವಾಗಿ ಸಾಗಾಟ ಮಾಡಿರುವುದರಿಂದ ವಿಟ್ಲ ಪೊಲೀಸು ಠಾಣೆಯ ಪೊಲೀಸು ಉಪ ನಿರೀಕ್ಷಕರು, ಸ್ಥಳ ಮಹಜರುನೊಂದಿಗೆ ಅಕ್ರಮ ಸೊತ್ತುಗಳನ್ನು ಸಾಗಾಣಿಕೆಗೆ ಬಳಸಿದ ಮಾರುತಿ 800 ಕಾರು ಸಂಖ್ಯೆ: ಕೆಎಲ್-14ಡಿ-1692 ನ್ನು ವಶಪಡಿಸಿಕೊಂಡಿರುತ್ತಾರೆ. ಜಪ್ತಿಪಡಿಸಿದ ಸಾರಾಯಿಯ ನಕಲಿ ಸಾರಾಯಿ ಮತ್ತು ಮಾನವನ ಸೇವನೆಗೆ ಯೋಗ್ಯವಲ್ಲವೆಂದು ರಾಸಾಯನಿಕ ತಜ್ಞರ ವರರದಿಯ ಪ್ರಕಾರ ದೃಢಪಟ್ಟಿದ್ದು ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಮತ್ತು ವಾಹನಕ್ಕೆ ನಕಲಿ ನಂಬರ್ ಅಳವಡಿಸಿ ಅಬಕಾರಿ ಕಾಯ್ದೆ ಉಲ್ಲಂಘನೆಗೆ ಬಳಸಿರುವುದು ಸಾರಿಗೆ ಅಧಿಕಾರಿ, ಕಾಸರಗೋಡು ಇವರು ನೀಡಿರುವ "ಬಿ" ಎಕ್ಸ್‌ಟ್ರಾಕ್ಟ್ ವರದಿಯಿಂದ ಸ್ಪಷ್ಟವಾಗಿರುತ್ತದೆ.

ಅಬಕಾರಿ ನಿರೀಕ್ಷಕರು ಬಂಟ್ವಾಳ ವಲಯರವರ ತನಿಖಾ ವರದಿಯಲ್ಲಿ ವಾಹನಕ್ಕೆ ನಕಲಿ ನಂಬರ್ ಅಳವಡಿಸಿ ಸಾಗಾಣಿಕೆ ಮಾಡಿರುವುದು ಹಾಗೂ ವಶಪಡಿಸಿಕೊಂಡ ಕಾರಿಗೂ ಮತ್ತು ನಿರೀಕ್ಷಕರು ನೀಡಿರುವ "ಬಿ" ಅಬ್‌ಸ್ಟ್ರಾಕ್ ವರದಿಗೂ ಒಂದಕ್ಕೊಂದು ತಾಳೆಯಾಗಿರುವುದಿಲ್ಲ. ಆದುದರಿಂದ ಸದರಿ ವಾಹನವನ್ನು ಅಕ್ರಮ ಚಟುವಟಿಕೆಗೆ ಬಳಸಿರುತ್ತಾರೆಂದು ಪ್ರಾಧಿಕಾರವು ಭಾವಿಸಬೇಕಾಗಿರುತ್ತದೆ. ವಶಪಡಿಸಿಕೊಳ್ಳಲಾಗಿರುವ ವಾಹನ ಕಾರು ಆಗಿದ್ದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಕಾಸರಗೋಡು ಇವರು ನೀಡಿರುವ "ಬಿ" ಅಬ್‌ಸ್ಟ್ರಾಕ್ಟ್ ವರದಿ ಪ್ರಕಾರ ಸದ್ರಿ ನೊಂದಾವಣೆ ಸಂ: ಕೆಎಲ್-14-ಡಿ 1692 ರ ವಾಹನ ಮೋಟಾರು ಸೈಕಲ್ ವಾಹನದ ನೊಂದಣೆಯಾಗಿರುವುದರಿಂದ ನಕಲಿ ನೊಂದಣಿ ಸಂಖ್ಯೆಯನ್ನು ಉಪಯೋಗಿಸಿ ಅಕ್ರಮ ಮದ್ಯ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.

ಈ ಮೇಲಿನ ಪುರಾವೆಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿದ್ದು ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಸದರಿ ಪ್ರಕರಣದಲ್ಲಿ ಜಪ್ತಿ ಪಡಿಸಿದ ಮಾರುತಿ ಕಾರು ಸಂ: ಕೆಎಲ್-14-ಡಿ-1692 ನ್ನು ಮತ್ತು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 100 ಎಂಎಲ್‌ನ 4500 ಸಾರಾಯಿ ತೊಟ್ಟೆಗಳಲ್ಲಿ ರಾಸಾಯನಿಕ ವಿಶ್ಲೇಷಣೆಗೆ ತೆಗೆದ ಸಾರಾಯಿ ತೊಟ್ಟೆಗಳನ್ನು ಹೊರತುಪಡಿಸಿ ಉಳಿದ ಸಾರಾಯಿ ತೊಟ್ಟೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಬಹುದಾಗಿದೆ. ಸದ್ರಿ ಮೇಲಿನ ಪುರಾವೆಗಳನ್ನು ಪರಿಗಣಿಸಿ,

ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ 100 ಮಿಲಿಯ 4500 ಸಾರಾಯಿ ತೊಟ್ಟೆಗಳನ್ನು ಅಕ್ರಮವಾಗಿ, ವಾಹನಕ್ಕೆ ನಕಲಿ ನೋಂದಣಿ ಸಂಖ್ಯೆ ಅಳವಡಿಸಿ, ಅಕ್ರಮ ಸಾಗಾಣಿಕೆಗೆ ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತು ಆಗಿರುವುದರಿಂದ ಈ ಕೆಳಗಿನ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅದಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ರ ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ 43(ಬಿ) ರ ಅನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43(ಸಿ) ರನ್ವಯ ಪೊಲೀಸು ಉಪ ನಿರೀಕ್ಷಕರು, ವಿಟ್ಲ ಪೊಲೀಸು ಠಾಣೆ, ವಿಟ್ಲ ಇವರ ಮೊಕದ್ದಮೆ ಸಂಖ್ಯೆ:46/2004 ದಿನಾಂಕ:19.4.2004 ರಲ್ಲಿ ವಶಪಡಿಸಿಕೊಂಡಿರುವ ವಾಹನ ಮಾರುತಿ ಕಾರು ಸಂ: ಕೆಎಲ್:14ಡಿ-1692 ನ್ನು ಹಾಗೂ ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 100 ಮಿಲಿಯ 4500 ಸಾರಾಯಿ ತುಂಬಿದ ಸ್ಯಾಚೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆಯಲಾಗಿರುವ ಮಾದರಿಗಳನ್ನು ಹೊರತುಪಡಿಸಿ, ಉಳಿದ ಸಾರಾಯಿ ತುಂಬಿದ ಸ್ಯಾಚೇಟುಗಳನ್ನು ಮುಟ್ಟುಗೋಲು ಹಾಕಿ ಆದೇಶಿಸಿರುತ್ತೇನೆ. ಸಾರಾಯಿ ತೊಟ್ಟೆಗಳ ರಾಸಾಯನಿಕ ವಿಶ್ಲೇಷಣೆ ವರದಿ ದಿ:30.9.2004ರ ಪ್ರಕಾರ ಸಾರಾಯಿಯ ತೀಕ್ಷ್ಣತೆ ಕಡಿಮೆ ಪ್ರಮಾಣದಾಗಿದ್ದು ಇದು ಅನಧಿಕೃತವಾಗಿ ತಯಾರಿಸಲಾಗಿರುವ ಸಾರಾಯಿಯಾಗಿರುವುದರಿಂದ ಮಾನವನ ಸೇವನೆಗೆ ನೀಡುವುದು ಜೀವಕ್ಕೆ ಅಪಾಯ ತರುವ ಸಂಭವ ಇರುವುದರಿಂದ, ಸದ್ರಿ ಮುಟ್ಟುಗೋಲು ಸಾರಾಯಿಯನ್ನು ನಿಯಮ 43(ಎ) 3 ರನ್ವಯ ಪಂಚರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ, ನಾಶಪಡಿಸಲು ಅಬಕಾರಿ ನಿರೀಕ್ಷಕರು, ಬಂಟ್ವಾಳ ಇವರಿಗೆ ಅಧಿಕಾರ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 29.10.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಪಿ.ಆರ್. 1557 ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ :ಎಸ್‌ಡಿಕೆ:423:ಡಿಟಿಸಿಆರ್:2000-2001 ದಿನಾಂಕ: 21ನೇ ಅಕ್ಟೋಬರ್ 2004**

**ಉಪಸ್ಥಿತರು** : ಗೋವಿಂದಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದರರು:**
ಅಬಕಾರಿ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

**ವಿರುದ್ಧ**

**ಆರೋಪಿಗಳು:**
ಪತ್ತೆಯಾಗಿರುವುದಿಲ್ಲ.

**ಅರ್ಜಿದಾರರು**
ಶ್ರೀ ಕೆ. ರವೀಂದ್ರ ಮಲ್ಯ, ಬಿನ್: ಕೆ.ಕೆ.ಮಲ್ಯ ವಾಸ:8.14.1090,
ಗೋಪಾಲ ಕಂಪೌಂಡ್, ಕಂಬ್ಳ ಕ್ರಾಸ್ ರೋಡ್, ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 16-6-2001ರಂದು ಮಧ್ಯಾಹ್ನ 12.30 ಗಂಟೆಗೆ ಮಂಗಳೂರು ನಗರದ ಪದವು ಗ್ರಾಮದ ಕುಲಶೇಖರ ಚೌಕಿ ಎಂಬಲ್ಲಿ ಸನವಿಕ ಕೊರ್ಸಿಲ್ವ ಕಂಪೌಂಡಿನಲ್ಲಿ ಮಂಗಳೂರು ಅಬಕಾರಿ ನಿರೀಕ್ಷಕರು, ದಾಳಿ ನಡೆಸುವ ಸಮಯದಲ್ಲಿ ಕಟ್ಟಡದ ಮುಂಬಾಗಿಲು ಮುಚ್ಚಿದ್ದ ಹಿಂಬಾಗಿಲು ತೆರೆದ ಸ್ಥಿತಿಯಲ್ಲಿದ್ದು ಮನೆಯಲ್ಲಿದ್ದ ಆಸಾಮಿಯು ಹಿಂದಿನ ಬಾಗಿಲಿನಿಂದ ಪರಾರಿಯಾಗಿದ್ದು ಆತನನ್ನು ಬೆನ್ನಟ್ಟಲು ತಪ್ಪಿಸಿಕೊಂಡಿರುತ್ತಾನೆ. ಇಲಾಖೆಯ ಸಿಬ್ಬಂದಿಯೊಂದಿಗೆ ಹಾಜರಿದ್ದ ಪಂಚರೊಂದಿಗೆ ಸದ್ರಿ ಮನೆಯ ವರಾಂಡದಲ್ಲಿದ್ದ ಬಿಳಿ ಬಣ್ಣದ ಕಾರು ನೊಂದಣಿ ಸಂ: ಕೆಎ-18 5263 ನ್ನು ಶೋಧನೆ ನಡೆಸಲು ಕಾರಿನಲ್ಲಿ ಚಾಲಕನ ಹಿಂಭಾಗದ ಸೀಟಿನಲ್ಲಿ 2 ಬಿಳಿ ಬಣ್ಣದ ಚೀಲದಲ್ಲಿ 100 ಮಿಲಿ ಗಾತ್ರದ ಪ್ರತಿ ಚೀಲದಲ್ಲಿ ಸುಮಾರು 500 ಸಾರಾಯಿ ಸಾಚೆಟ್‌ಗಳಿರುವುದು ಕಂಡು ಬಂದಿದ್ದು, ಸದ್ರಿ ಕಾರಿನ ಡಿಕ್ಕಿಯಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ 100 ಸಾರಾಯಿ ಸಾಚೆಟ್‌ಗಳು ಇದ್ದು ಸಾಚೆಟ್‌ಗಳ ಮೇಲೆ ಮೆ: ಮೈಸೂರು ಶುಗರ್ ಕಂಪನಿ ಎಂದು ಮುದ್ರೆಯಿರುವುದು ಕಂಡುಬಂದಿರುತ್ತದೆ. ನಂತರ ಮನೆಯನ್ನು ಶೋಧನೆ ಮಾಡಲಾಗಿ ಮನೆಯ ಬಲಬದಿಯಲ್ಲಿರುವ ವಿಶಾಲವಾದ ಕೋಣೆಯಲ್ಲಿ ಒಂದು ಸಾರಾಯಿ ತಯಾರಿಸುವ ಸಾಚೆಟ್ ಯಂತ್ರ ಅದಕ್ಕೆ ಹೊಂದಿಕೊಂಡು 1/4 ಹೆಚ್.ಪಿ. ಮೋಟಾರು ಪಂಪು ಅದರ ಪಕ್ಕದಲ್ಲಿ 200 ಲೀ ಸಾಮರ್ಥ್ಯದ ನೀಲಿ ಬಣ್ಣದ ಬ್ಯಾರೆಲ್ ಇದ್ದು, ಅದರಲ್ಲಿ 10 ಲೀಟರು ಸಾರಾಯಿಯಿದ್ದು ಪಂಪಿಗೂ, ಬ್ಯಾರಲಿಗೂ ಹಸಿರು ಬಣ್ಣದ ಪೈಪನ್ನು ಸಾರಾಯಿ ತಯಾರಿಸುವ ಯಂತ್ರಕ್ಕೆ ಜೋಡಿಸಲಾಗಿತ್ತು. ಸದ್ರಿ ಸಾರಾಯಿ ಸಾಚೆಟ್ ತಯಾರಿಸುವ ಯಂತ್ರದಲ್ಲಿ ಮೈಸೂರು ಸಕ್ಕರೆ ಕಂಪನಿ, ದ.ಕ. ಜಿಲ್ಲೆ ಎಂದು ಮುದ್ರಿತವಿರುವ ಸುಮಾರು 40 ಮೀಟರು ಫಿಲಂ ರೋಲನ್ನು ಅಳವಡಿಸಿದ್ದು, ಸ್ಯಾಚೆಟ್ ಯಂತ್ರದ ಮುಂದೆ ಇದ್ದ ಪ್ಲಾಸ್ಟಿಕ್ ಟ್ರೇಯಲ್ಲಿ 100 ಮಿಲಿಯ 15 ಸಾಚೆಟ್ ಇರುವುದು ಕಂಡುಬಂತು. ಈ ರೀತಿ ಅಕ್ರಮವಾಗಿ ಸಾರಾಯಿ ಸಾಚೆಟ್ ತಯಾರಿಕೆ ನಡೆಯುತ್ತಿರುವುದು ಖಚಿತವಾಗಿರುತ್ತದೆ. ಅಲ್ಲದೆ ಸರಾಯಿ ಯಂತ್ರದ ಪಕ್ಕದಲ್ಲಿ 35 ಲೀಟರು ಗಾತ್ರದ 30 ಬಿಳಿ ಬಣ್ಣದ ಖಾಲಿ ಪ್ಲಾಸ್ಟಿಕ್ ಕ್ಯಾನುಗಳು, ಅವುಗಳ ಪಕ್ಕದಲ್ಲಿ 6 ಬಿಳಿ ಬಣ್ಣದ 35 ಲೀಟರು ಸಾಮರ್ಥ್ಯದ ಕ್ಯಾನುಗಳಲ್ಲಿ 210 ಲೀಟರು ಮದ್ಯಸಾರ 8 ರಟ್ಟಿನ ಪೆಟ್ಟಿಗೆಗಳಲ್ಲಿ ಮೈಸೂರು ಸಕ್ಕರೆ ಕಂಪನಿ ಎಂದು ಮುದ್ರೆಯಿರುವ 8 ಫಿಲಂ ರೋಲ್‌ಗಳು, ವಾಹನಕ್ಕೆ ಅಳವಡಿಸುವ 8 ನಕಲಿ ನಂಬರ್ ಪ್ಲೇಟ್‌ಗಳು ಇದ್ದು ಅವುಗಳ ವಿವರ ಈ ಕೆಳಗಿನಂತಿರುತ್ತದೆ. ಕೆಎ-19-ಎಂ-9673 (2) ಕೆಎ-19-ಎಂ-7162 (2) ಕೆಎಲ್-10-ಇ-8188 (2) ಹಾಗೂ ಕೆಎ19-ಎಂ-5830 (2) ಈ ರೀತಿ ನಕಲಿ ನಂಬರ್ ಪ್ಲೇಟುಗಳು ಕಂಡುಬಂದಿರುತ್ತದೆ. ನಂತರ ರಾಸಾಯನಿಕ ಪರೀಕ್ಷೆಗಾಗಿ ಕಾರಿನಲ್ಲಿ ಪತ್ತೆಯಾದ 2 ಚೀಲಗಳಿಂದ ತಲಾ 10 ಸಾಚೆಟ್‌ಗಳನ್ನು ಹಾಗೂ ಡಿಕ್ಕಿಯಲ್ಲಿ ದೊರೆತಿರುವ ಚೀಲದಿಂದ 5 ಸ್ಯಾಚೆಟ್‌ಗಳನ್ನು ಸಾರಾಯಿ ಸಾಚೆಟ್ ಯಂತ್ರದ ಪಕ್ಕದಲ್ಲಿ ಟ್ರೇಯಲ್ಲಿ ಪತ್ತೆಯಾದ 15 ಸ್ಯಾಚೆಟ್‌ಗಳಿಂದ 2 ಸ್ಯಾಚೆಟ್‌ಗಳನ್ನು, ಹೀಗೆ 27 ಸ್ಯಾಚೆಟ್‌ಗಳನ್ನು, ಬ್ಯಾರೆಲ್‌ನಲ್ಲಿದ್ದ ಸಾರಾಯಿಯಿಂದ 180 ಮಿಲಿಯ 2 ಬಾಟ್ಲಿಗಳನ್ನು ತೆಗೆದು 6 ಕ್ಯಾನುಗಳಲ್ಲಿ ದೊರೆತ ಮದ್ಯಸಾರದಿಂದ ತಲಾ 1 ರಂತೆ 180 ಮಿಲಿಯ ಬಾಟ್ಲಿಗಳಲ್ಲಿ 6 ಮಾದರಿಗಳನ್ನು ತೆಗೆದು ಎಲ್ಲಾ ಬಾಟ್ಲಿಗಳಿಗೂ ಹಾಗೂ ಸಾಚೆಟುಗಳಿಗೂ ಬಟ್ಟೆದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಿರುತ್ತಾರೆ. ಮತ್ತು ಮಾದರಿ ಶೀಷೆಗಳಿಗೂ ಹಾಗೂ ಸ್ಯಾಚೆಟ್‌ಗಳಿಗೂ ಗುರುತಿನ ಚೀಟಿಯನ್ನು ಅಂಟಿಸಿರುತ್ತಾರೆ. ಸದ್ರಿ ಮನೆಯ ಮಾಲೀಕ ರಿಚರ್ಡ್ ಡಿಸಿಲ್ವ ಎಂಬುದಾಗಿ ಮನೆಯ ನೀರು ಕಂದಾಯದ ಬಿಲ್ಲಿನಿಂದ ತಿಳಿದು ಬಂದಿರುತ್ತದೆ. ಆತನು ಹೊರ ದೇಶದಲ್ಲಿದ್ದು, ಮನೆಯನ್ನು ಆರೋಪಿತ ವಕ್ತಿಗಳಿಗೆ ಬಾಡಿಗೆಗೆ ನೀಡಿರುವುದಾಗಿ ಕಂಡು ಬಂದಿರುತ್ತದೆ. ಈ ರೀತಿ ಅಕ್ರಮ ಸಾರಾಯಿ ತಯಾರಿಕೆಯೂ ಹಾಗೂ ಸಾಗಣೆಯು ಅಬಕಾರಿ ಕಾನೂನಿನ ಅಡಿಯಲ್ಲಿ ಶಿಕ್ಷಾರ್ಹವಾಗಿರುವುದರಿಂದ ದೊರೆತ ಎಲ್ಲಾ ವಸ್ತುಗಳನ್ನು ಹಾಗೂ ವಾಹನವನ್ನು ಸರ್ಕಾರಕ್ಕೆ

ವಶಪಡಿಸಿಕೊಂಡು ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿರುತ್ತಾರೆ. ಇದು ಅಕ್ರಮ ತಯಾರಿಕೆಯಾಗಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 11,13,14 ರೀತ್ಯಾ ಅಪರಾಧವಾಗಿದ್ದು, ಕಲಂ 34ರ ರೀತ್ಯಾ ಶಿಕ್ಷಾರ್ಹವಾಗಿದ್ದು ತಕ್ಷೀರು ಸಂಖ್ಯೆ:50/2000-01 ದಿ:16.6.2001ರ ಮೂಲಕ ಮೊಕದ್ದಮೆ ದಾಖಲಿಸಿ ಪ್ರಥಮ ಮಾಹಿತಿ ವರದಿ ಹಾಗೂ ಮಹಜರನ್ನು ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ಸಲ್ಲಿಸಿರುತ್ತಾರೆ. ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ಇವರಿಗೆ ಪಾಧಿಕಾರದ ಅನುಮತಿಯೊಂದಿಗೆ ಹಸ್ತಾಂತರಿಸಿರುತ್ತಾರೆ.

ದಿನಾಂಕ: 19.8.2001 ರಂದು ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನ ಮಾಲೀಕರಾದ ರವೀಂದ್ರ ಮಲ್ಯ ಎಂಬುವರು ಈ ಪ್ರಾಧಿಕಾರಕ್ಕೆ ತಮ್ಮ ವಕೀಲರ ಮುಖಾಂತರ ಅರ್ಜಿಯನ್ನು ಸಲ್ಲಿಸಿ ಜಪ್ತಿಪಡಿಸಲಾಗಿರುವ ವಾಹನದ ಅಸಲಿ/ನೊಂದಣಿ ಸಂಖ್ಯೆ: ಕೆಎ19-ಎಂ-5525 ಎಂದು ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ಬಿಡುಗಡೆಗೊಳಿಸಲು ಕೋರಿರುತ್ತಾರೆ. ವಾಹನವನ್ನು ತಮ್ಮ ತಿಳುವಳಿಕೆಗೆ ಬಾರದೇ ಅಕ್ರಮ ಸಾರಾಯಿ ಸಾಗಣೆಗೆ ಬಳಸಲಾಗಿದ್ದು, ದಿ: 16.6.2001 ರಂದು ತನ್ನ ವಾಹನವನ್ನು ದುರಸ್ಥಿಗಾಗಿ ಕಳುಹಿಸಿದ್ದಾಗಿ ತಿಳಿಸುತ್ತಾ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಕೋರಿರುತ್ತಾರೆ. ಆದರೆ ಪ್ರಾಧಿಕಾರವು ಪ್ರಕರಣದಲ್ಲಿ ಲಭ್ಯವಿರುವ ಪುರಾವೆ ಹಾಗೂ ದಾಖಲಾತಿಗಳಿಂದ ವಾಹನವನ್ನು ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿಕೊಂಡು ಸಾರಾಯಿ ಸಾಗಣೆ ಮಾಡಿರುವ ಹಾಗೂ ತಕ್ಷೀರು ಸ್ಥಳದಲ್ಲಿ 8 ನಕಲಿ ಸಂಖ್ಯಾ ಫಲಕಗಳನ್ನು ವಶಪಡಿಸಿಕೊಂಡಿರುವುದರ ಹಿನ್ನೆಲೆಯಲ್ಲಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವುದಿಲ್ಲ, ವಾಹನವು ಇಲಾಖೆಯ ವಶದಲ್ಲಿಯೇ ಇರುತ್ತದೆ. ಪ್ರಕರಣದ ತನಿಖೆಯನ್ನು ಪೂರೈಸಿದ ತನಿಖಾಧಿಕಾರಿಯು ಪ್ರಕರಣದಲ್ಲಿ ಜಪ್ತಿಗೊಳಿಸಿದ್ದ ಮದ್ಯಸಾರ ಹಾಗೂ ಸಾರಾಯಿಯ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು ಮದ್ಯಸಾರದ ತೀಕ್ಷ್ಣತೆ $5^{\circ}$ ಒಪಿ ಇದ್ದು, ಸಾರಾಯಿ ತೀಕ್ಷ್ಣತೆ 52 ಯುಪಿ ಇದ್ದು, ಜಪ್ತಿಪಡಿಸಲಾಗಿದ್ದ ಎಲ್ಲಾ ಸ್ವತ್ತುಗಳನ್ನು ಕಾರನ್ನು ಹೊರತುಪಡಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯಸಾರವನ್ನು ಸಾರಾಯಿ ಸಂಸ್ಕರಣಾ ಘಟಕ, ಪಡೀಲ್ ಮಂಗಳೂರು ಇವರಿಗೆ ಹಂಚಿಕೆ ಮಾಡಿ ಸಾರಾಯಿಯನ್ನು ನಾಶಪಡಿಸಲು ಹಾಗೂ ಉಳಿದ ಸ್ವತ್ತುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ದಿ:21.12.2001 ರಂದು ಪ್ರಾಧಿಕಾರವು ಆದೇಶ ನೀಡಿರುತ್ತದೆ.

ಈ ಪ್ರಾಧಿಕಾರವು ದಿ:8.9.2004 ರಂದು ಕಾರಣ ಕೇಳಿ ನೀಡಲಾದ ನೋಟೀಸಿಗೆ ದಿ:17.9.2004 ರಂದು ಉತ್ತರ ಸಲ್ಲಿಸಿ ತಮ್ಮ ಮೇಲಿನ ಆರೋಪವನ್ನು ಅಲ್ಲಗಳೆದಿರುತ್ತಾರೆ. ದಿ:16.6.2001 ರಂದು ತನ್ನ ವಾಹನವನ್ನು ದುರಸ್ಥಿಗಾಗಿ ಗ್ಯಾರೇಜಿಗೆ ಕಳುಹಿಸಿರುವುದಾಗಿ ತಿಳಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆ ಪರ ಫಿರ್ಯಾದಿ, ತನಿಖಾಧಿಕಾರಿ ಹಾಗೂ ಇನ್ನಿತರ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿದೆ. ಹಾಗೂ ಪ್ರಕರಣದಲ್ಲಿ ಪ್ರತಿರಕ್ಷಾ ಪರ ಯಾವುದೇ ಸಾಕ್ಷಿ ಹಾಗೂ ವಾಹನ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಿ ಯಾವುದೇ ಸಾಕ್ಷಿಗಳನ್ನು ಸಲ್ಲಿಸಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 16.6.2001 ರಂದು ವಾಹನ ಕಾರು ಸಂ: 18-ಎಂ-5263 ರಲ್ಲಿ ಅಕ್ರಮವಾಗಿ ಮದ್ಯಸಾರವನ್ನು ಸಾಗಾಣಿಕೆ ಮಾಡಲಾಗಿದೆಯೇ?

2. ಸದ್ರಿ ವಾಹನದ ಮಾಲೀಕರು ತಾವೆಂದೂ ಮತ್ತು ತನ್ನ ತಿಳುವಳಿಕೆಗೆ ಬಾರದೇ ವಾಹನವನ್ನು ಅಕ್ರಮ ಮದ್ಯಸಾರದ ಸಾಗಣೆಗೆ ಉಪಯೋಗಿಸಲಾಗಿದೆ ಎಂಬುದನ್ನು ಸಾಬೀತುಪಡಿಸಿದ್ದಾರೆಯೇ?

3. ಜಪ್ತಿಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲೆಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ-3:**

ಶ್ರೀ ಜಾರ್ಜ್ ಪಿಂಟೋ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ:11.3.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆ ನೀಡಿರುತ್ತಾರೆ. ತಾನು ದಿ: 16.6.2001 ರಂದು 12.00 ಕ್ಕೆ ದೊರೆತ ವರ್ತಮಾನದ ಮೇರೆಗೆ ಮಂಗಳೂರು ನಗರ ಪದವು ಗ್ರಾಮ ಕುಲಶೇಖರ ಚೌಕಿಯ ಬಳಿಯಿರುವ ಸನ್ನಿಕ್ ಕೊರ್ಸಿಲ್ವಾ ಎಂಬ ಮನೆಗೆ ದಾಳಿ ಮಾಡಿದಾಗ ಮನೆಯ ಬಾಗಿಲು ತೆರೆದ ಸ್ಥಿತಿಯಲ್ಲಿದ್ದು ಸಿಬ್ಬಂದಿಯವರು ಮನೆಯನ್ನು ಸುತ್ತುವರೆಯಲು 40 ವರ್ಷದ ಪ್ರಾಯದ ಆಸಾಮಿಯು ಮನೆಯ ಹಿಂದಿನ ಬಾಗಿಲಿನಿಂದ ತಪ್ಪಿಸಿಕೊಂಡು ಪರಾರಿಯಾಗಿರುತ್ತಾನೆ. ಸಿಬ್ಬಂದಿಯು ಪ್ರಯತ್ನಪಟ್ಟಿದ್ದು ಆಸಾಮಿಯು ಪತ್ತೆಯಾಗಿರುವುದಿಲ್ಲವೆಂದು ಶೋಧನೆಗಾಗಿ ನ್ಯಾಯಾಲಯದಲ್ಲಿ ಸರ್ಚ್ ವಾರೆಂಟನ್ನು ಪಡೆಯಲು ಕಾಲಾವಕಾಶವಿಲ್ಲದ್ದರಿಂದ ಕಲಂ 54 ರಂತೆ ಶೋಧನಾ ಪಟ್ಟಿಯನ್ನು ತಯಾರಿಸಿ ಮನೆಯನ್ನು ಹಾಗೂ ಮನೆಯ ವರಾಂಡದಲ್ಲಿದ್ದ ಕಾರನ್ನು ಪಂಚರ ಸಮಕ್ಷಮ ಶೋಧನೆ ಮಾಡಲು ವರಾಂಡದಲ್ಲಿದ್ದ ಕಾರು ಸಂ: ಕೆಎ-18-ಎಂ-5263, ಚಾಸಿಸ್ ಸಂಖ್ಯೆ:-ಎಸ್‌ಬಿ-308 ಐ.ಎನ್.814855 ಆಗಿದ್ದು ಸದ್ರಿ ಕಾರಿನಲ್ಲಿ ಚಾಲಕನ ಹಿಂದಿನ ಸೀಟಿನಲ್ಲಿ 2 ಬಿಳಿ ಬಣ್ಣದ ಗೋಣಿ ಚೀಲದಲ್ಲಿ 100 ಮಿಲಿಯ ಮೈಸೂರು ಸಕ್ಕರೆ ಕಂಪನಿ ಎಂದು ಮುದ್ರೆಯಿರುವ ಸುಮಾರು 1000 ಸಾರಾಯಿ ಸ್ಯಾಚೆಟುಗಳು, (ಪ್ರತಿ ಚೀಲದಲ್ಲಿ 500 ರಂತೆ) ಕಂಡುಬಂದಿದ್ದು ಸದ್ರಿ ಕಾರಿನ ಡಿಕ್ಕಿಯಲ್ಲಿ ಒಂದು ಪಾಸ್ಟಿಕ್ ಚೀಲದಲ್ಲಿ 100 ಸ್ಯಾಚೆಟ್‌ಗಳು ಇರುವುದು ಕಂಡು ಬಂತು. ನಂತರ ಮನೆಯನ್ನು ಶೋಧನೆ ಮಾಡಿದಾಗ ಮನೆಯ ಬಲಗಡೆ ವಿಶಾಲ ಕೋಣೆಯಲ್ಲಿ ಸಾರಾಯಿ ಸ್ಯಾಚೆಟ್ ತಯಾರಿಸುವ 1 ಯಂತ್ರ, ಅದಕ್ಕೆ ಹೊಂದಿಕೊಂಡು 1/4 ಹೆಚ್.ಪಿ. ಮೋಟಾರು ಸದ್ರಿ ಮೋಟಾರಿನಿಂದ ಯಂತ್ರಕ್ಕೆ ಹಸಿರು ಬಣ್ಣದ ಪೈಪು ಜೋಡಣೆಯಿದ್ದು ಇನ್ನೊಂದು ಪಕ್ಕದಲ್ಲಿ 200 ಲೀಟರು ಸಾಮರ್ಥ್ಯದ ನೀಲಿ ಬಣ್ಣದ ಬ್ಯಾರೆಲಿನಲ್ಲಿ 10 ಲೀಟರು ಸಾರಾಯಿ, ಇನ್ನೊಂದು ನೀಲಿ ಬಣ್ಣದ ಬ್ಯಾರೆಲಿನಲ್ಲಿ 20 ಲೀಟರು ಸಾರಾಯಿ ಹಾಗೂ ಸ್ಯಾಚೆಟ್ ಯಂತ್ರದಲ್ಲಿ ಮೈ ಶುಗರ್ ಕಂಪನಿ ಎಂದು ಮುದ್ರಿತವಾದ 40 ಮೀಟರು ಫೀಲಂ ರೋಲ್ ಇದ್ದು ಸಾರಾಯಿ ಸಾಚೆಟ್ ಯಂತ್ರದ ಪಕ್ಕದಲ್ಲಿ ಟ್ರೇಯಲ್ಲಿ 100 ಮಿಲಿಯ 15 ಸಾರಾಯಿ ಸಾಚೆಟ್‌ಗಳಿರುವುದು ಕಂಡು ಬಂತು, ಸಾಚೆಟ್ ಯಂತ್ರದ ಪಕ್ಕದಲ್ಲಿ 35 ಲೀಟರು ಸಾಮರ್ಥ್ಯದ 30 ಖಾಲಿ ಕ್ಯಾನುಗಳು ಮತ್ತು 6 ಕ್ಯಾನುಗಳಲ್ಲಿ ತಲಾ 35 ಲೀಟರಿನಂತೆ 210 ಲೀಟರು ಮದ್ಯಸಾರ ಹಾಗೂ 8 ರಟ್ಟಿನ ಪೆಟ್ಟಿಗೆಗಳಲ್ಲಿ ಮೈಶುಗರ್ ಕಂಪನಿ, ದ.ಕ. ಜಿಲ್ಲೆ ಮತ್ತು ಉಡುಪಿ ಎಂದು ಮುದ್ರೆಯಿರುವ 8 ಫಿಲಂ ರೋಲ್‌ಗಳು, ಪಕ್ಕದಲ್ಲಿ 8 ವಾಹನದ ನಕಲಿ ನಂಬರ್ ಪ್ಲೇಟ್‌ಗಳು (ಕೆಎ-19-ಎಂ-9673 (2), ಕೆಎ 19-ಎಂ-7162 (2) ಕೆಎಲ್-102-81988 (2) ಹಾಗೂ ಕೆಎ 19-ಎಂ-5830 (2) ಪತ್ತೆಯಾಗಿರುತ್ತವೆ. ಕಾರಿನಲ್ಲಿ ಪತ್ತೆಯಾದ ಪ್ರತಿ ಗೋಣಿ ಚೀಲದಿಂದ ತಲಾ 10 ರಂತೆ, ಡಿಕ್ಕಿಯಲ್ಲಿ ಪತ್ತೆಯಾದ ಗೋಣಿ ಚೀಲದಿಂದ 5 ಸಾಚೆಟ್‌ಗಳನ್ನು ಮದ್ಯಸಾರದ ಕ್ಯಾನುಗಳಿಂದ 180 ಮಿಲಿಯಂತೆ 6 ಶೀಷೆಗಳನ್ನು ರಾಸಾಯನಿಕ ಪರೀಕ್ಷೆಯ ಸಲುವಾಗಿ ಪ್ರತ್ಯೇಕಿಸಿ ಸ್ಯಾಚೆಟ್‌ಗಳಿಗೂ ಹಾಗೂ ಬಾಟ್ಲಿಗಳಿಗೂ ಬಟ್ಟೆ ದಾರ ಕಟ್ಟಿ ಇಲಾಖೆಯ ಸೀಲಿನಿಂದ ಸೀಲು ಮಾಡಲಾಯಿತು ಹಾಗೂ ಸದ್ರಿ ಬಾಟ್ಲಿಗಳಿಗೂ ಹಾಗೂ ಸ್ಯಾಚೆಟ್‌ಗಳಿಗೂ ಗುರುತಿನ ಚೀಟಿಯನ್ನು ಅಂಟಿಸಿರುತ್ತಾರೆ. ಮನೆಯ ಮಾಲೀಕ ರಿಚರ್ಡ್ ಡಿಸಿಲ್ವಾ ಎಂದು ಆತನು ಪರ ಊರಿನಲ್ಲಿರುವುದಾಗಿ

ಮನೆಯನ್ನು ಬಾಡಿಗೆಗೆ ನೀಡಿರುವುದಾಗಿ ತಿಳಿದುಬಂದಿರುತ್ತದೆ ಎಂದು ತಿಳಿಸಿರುತ್ತಾರೆ. ನಂತರ ಸ್ಥಳದಲ್ಲಿಯೇ ಮಹಜರು ತಯಾರಿಸಿದ್ದು, ಬಳಿಕ ಜಪ್ತಿಪಡಿಸಿದ ವಸ್ತುಗಳನ್ನು ಬಾಡಿಗೆ ವಾಹನದಲ್ಲಿ ಕಚೇರಿಗೆ ತಂದು ಪ್ರ.ಮಾ.ವ. ತಯಾರಿಸಿ ನ್ಯಾಯಾಲಯಕ್ಕೆ ದಾಖಲೆಗಳೊಂದಿಗೆ ಸಲ್ಲಿಸಿರುತ್ತಾರೆ. ಹಾಗೂ ಪ್ರಾಧಿಕಾರದ ಆದೇಶದಂತೆ ಪ್ರಕರಣದ ಸ್ವತ್ತುಗಳನ್ನು ದಾಖಲೆಗಳೊಂದಿಗೆ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಪ್ರಕರಣದ ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ಈಗಾಗಲೇ ನಿಶಾನೆ ಪಿ-1 ಎಂದು ಗುರುತಿಸಲಾಗಿದೆ ಮಹಜರು ಪ್ರತಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-2 ಎಂದು ಶೋಧನಾ ಪಟ್ಟಿಯನ್ನು ನಿಶಾನೆ ಪಿ-3 ಎಂದು ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸಲ್ಲಿಸಿದ್ದ ವರದಿಯನ್ನು ನಿಶಾನೆ ಪಿ-4 ಎಂದು ಈಗಾಗಲೇ ಗುರುತಿಸಲಾಗಿದೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ತನಗೆ ವರ್ತಮಾನ ಮಧ್ಯಾಹ್ನ 12-00 ಗಂಟೆಗೆ ದೊರೆತಿದ್ದು ತಕ್ಷೀರು 12.30ಕ್ಕೆ ತಲುಪಿರುತ್ತೇನೆ. ತಕ್ಷೀರು ಸ್ಥಳವು ಕಛೇರಿಯಿಂದ 7 ಕಿ.ಮೀ. ಅಂತರದಲ್ಲಿದೆ. ತಕ್ಷೀರು ಸ್ಥಳವನ್ನು ಸುತ್ತುವರೆದಿರುತ್ತೇವೆ. ಸದ್ರಿ ಮನೆಯ ಮುಂದಿನ ಬಾಗಿಲು ತೆರೆದಿತ್ತು. ಹಿಂದಿನ ಬಾಗಿಲು ತೆರೆದಿತ್ತೋ, ಮುಚ್ಚಿತ್ತೋ ಎಂದು ನೆನಪಿಲ್ಲ. ಸದ್ರಿ ದಿನದಂದು ನಾನು ಮುಂದಿನ ಬಾಗಿಲಿನಲ್ಲಿ ನಿಂತಿರುತ್ತೇನೆ. ಹಿಂದಿನ ಬಾಗಿಲಿನಿಂದ ಓಡಿಹೋದ ವ್ಯಕ್ತಿಯನ್ನು ನೋಡಿಲ್ಲ. ಕಾಲಾವಕಾಶವಿಲ್ಲದ್ದರಿಂದ ನ್ಯಾಯಾಲಯದಿಂದ ವಾರೆಂಟನ್ನು ಪಡೆಯಲು ಸಾಧ್ಯವಾಗಿಲ್ಲ. ಈ ಬಗ್ಗೆ ಮಹಜರಿನಲ್ಲಿ ನಮೂದಿಸಿಲ್ಲ ನಿಶಾನೆ ಪಿ-2 ನಾನೇ ಬರೆದಿರುತ್ತೇನೆ. ರಾಸಾಯನಿಕ ಪರೀಕ್ಷೆಗಾಗಿ 4.5 ಲೀಟರು ಸಾರಾಯಿಯನ್ನು ಮಾದರಿಗಾಗಿ ತೆಗೆದಿರುತ್ತೇನೆ. ತಕ್ಷೀರು ಸ್ಥಳದ ಸುತ್ತಲೂ ವಾಸದ ಮನೆಗಳಿರುತ್ತವೆ. ಸದ್ರಿ ಮನೆಗಳಿಂದ ಸಾಕ್ಷಿಗಾಗಿ ಯಾರನ್ನೂ ಕರೆದಿಲ್ಲ ಮನೆಯಲ್ಲಿ ವಾಸವಾಗಿರುವ ಬಾಡಿಗೆದಾರರನ್ನು ಆರೋಪಿಯನ್ನಾಗಿ ಮಾಡಲು ಯಾವುದೇ ದಾಖಲೆಗಳು ಸಿಗಲಿಲ್ಲವಾದ್ದರಿಂದ ಅವರನ್ನು ಆರೋಪಿಯನ್ನಾಗಿ ಮಾಡಿರುವುದಿಲ್ಲ. ಸದ್ರಿ ದಿನದಂದು ತಕ್ಷೀರು ಸ್ಥಳಕ್ಕೆ ಹೋಗಲಿಲ್ಲವೆಂದರೆ ಸರಿಯಲ್ಲ. ಈ ಪ್ರಕರಣದ ದಾಖಲೆಗಳನ್ನು ಕಛೇರಿಯಲ್ಲಿ ತಯಾರಿಸಿರುತ್ತೇನೆಂದರೆ ಸರಿಯಲ್ಲ, ಸದ್ರಿ ವಾಹನವನ್ನು ತಕ್ಷೀರು ಸ್ಥಳದಿಂದ ವಶಪಡಿಸಿಲ್ಲವೆಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷ್ಯವನ್ನು ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ:1**

ಶ್ರೀ ಅಜೀಜ್ ಪೆರ್ಮನ್ನೂರು, ಅಬಕಾರಿ ನಿರೀಕ್ಷಕರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು ಇವರು ದಿನಾಂಕ:23.10.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ತಾನು ಪ್ರಕರಣ ಸಂಖ್ಯೆ 50/2001-02 ದಿ: 16.6.2001ಕ್ಕೆ ಸಂಬಂಧಿಸಿದ ದಾಖಲೆ ಮಾದರಿಗಳನ್ನು ಹಾಗೂ ಸ್ವತ್ತುಗಳನ್ನು ದಿನಾಂಕ:20.9.2001 ರಂದು ಪಡೆದು ಅದೇ ದಿನ ಮಾದರಿಯ ರಾಸಾಯನಿಕ ವಿಶ್ಲೇಷಣೆಗೆ ಕಛೇರಿಯ ರಕ್ಷಕ ಹರೀಶ್‌ಕುಮಾರ್ ಇವರೊಂದಿಗೆ ಕಳುಹಿಸಿರುತ್ತೇನೆ. ರಾಸಾಯನಿಕ ವಿಶ್ಲೇಷಣಾ ವರದಿ ದಿ: 12.10.2001 ರಂದು ಬಂದಿರುತ್ತದೆ. ಈ ಕುರಿತು ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಇವರಿಗೆ ದಿ:3-11-2001 ರಂದು ವರದಿ ಮಾಡಿರುತ್ತೇನೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ವಾಹನದ "ಬಿ" ಎಕ್ಸ್‌ಟ್ರಾಕ್ಟ್‌ನ್ನು ಚಿಕ್ಕಮಂಗಳೂರಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು ದಿ:12.6.2002 ರಂದು ವರದಿ ನೀಡಿರುತ್ತೇನೆ. ಪ್ರಥಮ ಮಾಹಿತಿ ವರದಿಯನ್ನು ನೋಡಿದೆ, ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಈ ಪ್ರಕರಣದ ಮಹಜರನ್ನು ನೋಡಿದೆ ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ತಯಾರಿಸಿದ ಸರ್ಚ್ ಲಿಸ್ಟನ್ನು ನೋಡಿದೆನು. ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಅಬಕಾರಿ ಕಾಯ್ದೆ ಕಲಂ 43 ರ ಅಡಿಯಲ್ಲಿ ಸಲ್ಲಿಸಿದ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದೂ ಗುರುತಿಸಲಾಯಿತು. ಪ್ರಕರಣದ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ-5 ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ನೊಂದಣಿ ಸಂಖ್ಯೆ:ಕೆಎ-18-ಎಂ-5263ರ ಸಂಖ್ಯೆಯನ್ನು ಆಧರಿಸಿ ಆರ್.ಟಿ.ಓ. ಚಿಕ್ಕಮಗಳೂರು ಇವರಿಂದ ಪಡೆದ "ಬಿ" ಎಕ್ಸ್‌ಟ್ರಾಕ್ಟ್‌ನ್ನು ನೋಡಿದೆನು ಅದನ್ನು ನಿಶಾನೆ ಪಿ-6 ಎಂದು ಗುರುತಿಸಲಾಯಿತು. "ಬಿ" ಎಕ್ಸ್‌ಟ್ರಾಕ್ಟ್‌ನಲ್ಲಿ ನಮೂದಿಸಿರುವ ವಿವರಗಳನ್ನು ಪರಿಶೀಲಿಸಲಾಗಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದ ಇಂಜಿನ್ ಮತ್ತು ಚಾಸಿಸ್ ನಂಬರಿಗೆ ತಾಳೆಯಾಗಿರುವುದಿಲ್ಲ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಈ ತಕ್ಷೀರಿಗೆ ಸಂಬಂಧಪಟ್ಟ ತಕ್ಷೀರು ಸ್ಥಳಕ್ಕೆ ಭೇಟಿ ನೀಡಿಲ್ಲ. ಈ ಪ್ರಕರಣದಲ್ಲಿ ತನಿಖೆ ಇನ್ನು ಪೂರ್ಣಗೊಂಡಿಲ್ಲ. ಇಂಜಿನ್ ಮತ್ತು ಚಾಸಿಸ್ ನಂಬರ್ ನಕಲಿ ನಂಬರ್ ಕಂಡು ಬಂದ ಬಗ್ಗೆ ನಾನು ಪೊಲೀಸರಿಗೆ ದೂರು ನೀಡಿಲ್ಲ. ಈ ತಕ್ಷೀರಿಗೆ ಸಂಬಂಧಿಸಿ ಯಾವುದೇ ತನಿಖೆ ನಡೆಸಿಲ್ಲ, ಆರೋಪಿಗೆ ನೋಟೀಸು ನೀಡಿದ್ದು ಅವರು ಬಂದಿಲ್ಲ ಆರೋಪಿ ಯಾರೆಂದು ಇನ್ನು ದೃಢಪಟ್ಟಿಲ್ಲ ಅರ್ಜಿದಾರರು ಈ ಪ್ರಕರಣದಲ್ಲಿ ಭಾಗಿಯಾಗಿದ್ದಾರೆಂದು ಹೇಳಲು ನಾನು ಯಾವುದೇ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿಲ್ಲವೆಂದರೆ ಸರಿಯಲ್ಲ. ಈ ವಾಹನಕ್ಕೂ, ತಕ್ಷೀರಿಗೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲ ಸರಿಯಾಗಿ ತನಿಖೆ ಮಾಡಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

**ಪ್ರಾ.ಸಾ: 2**

ಶ್ರೀ ಹರೀಶ್ ಕುಮಾರ್, ಅಬಕಾರಿ ರಕ್ಷಕರು ದಿನಾಂಕ:23.10.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನೀಡಿರುತ್ತಾರೆ. ತಾನು ದಿನಾಂಕ: 20.9.2001 ರಂದು ಈ ಪ್ರಾಧಿಕಾರಕ್ಕೆ ಸಂಬಂಧಿಸಿದ ಈ ಪ್ರಕರಣಕ್ಕೆ ಸಂಬಂಧಿಸಿದ 7 ಮಾದರಿ ಶೀಷೆಗಳನ್ನು ಅದಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪಡೆದು ಅದೇ ದಿನ ರಾಸಾಯನಿಕ ವಿಶ್ಲೇಷಕರಿಗೆ ತಲುಪಿಸಿದೆನು. ದಿನಾಂಕ: 12.10.2001 ರಂದು ಪರೀಕ್ಷಿಸಿದ 7 ಬಾಟ್ಲಿಗಳನ್ನು ಹಾಗೂ ತಜ್ಞರ ವರದಿಯನ್ನು ರಾಸಾಯನಿಕ ವಿಶ್ಲೇಷಕರಿಂದ ಪಡೆದು ತನ್ನ ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ ಎಂದು ತನ್ನ ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ ಸದ್ರಿ ಮಾದರಿ ಶೀಷೆಗಳನ್ನು ನೋಡಿ ಸದ್ರಿ ಮಾದರಿ ಶೀಷೆಗಳನ್ನು ಈ ಪ್ರಕರಣಕ್ಕೆ ಸಂಬಂಧಿಸಿದ್ದೆಂದು ಗೊತ್ತಾಯಿತು. ಮಾದರಿ ಶೀಷೆಗಳನ್ನು ಪಡೆಯುವಾಗ ಅಬಕಾರಿ ನಿರೀಕ್ಷಕರಿಗೆ ಯಾವುದೇ ಸ್ವೀಕೃತಿ ಕೊಟ್ಟಿರುವುದಿಲ್ಲ. ನಿಶಾನೆ-ಪಿ.5 ಯನ್ನು ಪಡೆದುಕೊಂಡ ನಂತರ ಕಚೇರಿಯಲ್ಲಿ ನೋಡಿರುತ್ತೇನೆ. ನಾನು ಸದ್ರಿ ಮಾದರಿ ಶೀಷೆಗಳನ್ನು ಯಾವುದೇ ರಾಸಾಯನಿಕ ಪರೀಕ್ಷೆಗೆ ಕೊಂಡು ಹೋಗಲಿಲ್ಲವೆಂದರೆ ಸರಿಯಲ್ಲ. ಯಾವುದೇ ವರದಿಯನ್ನು ರಾಸಾಯನಿಕ ತಜ್ಞರಿಂದ ಪಡೆದುಕೊಂಡು ತಂದು ಕೊಟಿಲ್ಲವೆಂದರೆ ಸರಿಯಲ್ಲ ಎಂದು ತನ್ನ ಸಾಕ್ಷಿ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ಪ್ರಾ.ಸಾ. 1 ರಿಂದ ಪ್ರಾ.ಸಾ. 3 ಪ್ರಕರಣಕ್ಕೆ ಪೂರಕವಾಗಿ ಸಾಕ್ಷಿ ನೀಡಿರುತ್ತಾರೆ. ಇವರು ನೀಡಿರುವ ಹೇಳಿಕೆಯ ಮೇರೆಗೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ: 16.6.2001 ರಂದು ಪ್ರಕರಣದಲ್ಲಿ ಜಪ್ತಿಪಡಿಸಿರುವ ವಾಹನ ಮಾರುತಿ ಕಾರು ಸಂಖ್ಯೆ: ಕೆಎ:18-ಎಂ-5263 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದು ಸಾಬೀತಾಗಿದ್ದು ಅಕ್ರಮ ಸಾಗಣೆ ನಿಜವೆಂದು ಕಂಡು ಬರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸುತ್ತೇನೆ.

ಸದರಿ ಅಕ್ರಮ ಸಾರಾಯಿ ಸಾಗಾಣಿಕೆಯು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಅಗತ್ಯ ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸುವುದು ವಾಹನ ಮಾಲೀಕರ ಆದ್ಯ ಕರ್ತವ್ಯವಾಗಿರುತ್ತದೆ. ಆದರೆ ವಾಹನ ಮಾಲೀಕರಿಗೆ ಹಲವಾರು ಬಾರಿ ಈ ಪ್ರಾಧಿಕಾರವು ನೋಟೀಸು

ನೀಡಿದ್ದರೂ, ವಾಹನ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ, ಯಾವುದೇ ಸಾಕ್ಷ್ಯಾಧಾರಗಳನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿ, ಸದರಿ ಅಪರಾಧವು ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂದು ಸಾಬೀತುಪಡಿಸಿರುವುದಿಲ್ಲ. ಅಲ್ಲದೇ ಕಾರಣಕೇಳಿ ನೀಡಿದ್ದ ನೋಟೀಸಿಗೆ ಉತ್ತರ ನೀಡಿ ದಿ: 16.6.2001 ರಂದು 10 ಗಂಟೆಗೆ ತನ್ನ ವಾಹನವನ್ನು ದುರಸ್ಥಿಗಾಗಿ ತನ್ನ ಚಾಲಕನ ಮುಖಾಂತರ ಕಳುಹಿಸಿರುತ್ತೇನೆ ಎಂದು ತಿಳಿಸಿರುತ್ತಾರೆ. ಅರ್ಜಿದಾರರ ಪರ ವಕೀಲರಿಗೆ ವಿಚಾರಣೆಗಾಗಿ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು 2 ಬಾರಿ ಅವಕಾಶ ನೀಡಿದ್ದರೂ ವಕೀಲರು ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೇ ದಿ: 16.6.2001 ರಂದು ತಕ್ಷೀರು ಸ್ಥಳದಲ್ಲಿ ಅಕ್ರಮವಾಗಿ ಸಾರಾಯಿ ತಯಾರಿಕಾ ಘಟಕವು ಪತ್ತೆಯಾಗಿದ್ದು ಸಾರಾಯಿ ತಯಾರಿಕಾ ಸಾಮಗ್ರಿಗಳಾದ ಸ್ಯಾಚೆಟ್ ಯಂತ್ರ, ವಿದ್ಯುತ್ ಮೋಟಾರು, ಮದ್ಯಸಾರ, ಸಾರಾಯಿ ಹಾಗೂ ಸ್ಯಾಚೆಟ್ ತಯಾರಿಕೆಗಾಗಿ ಉಪಯೋಗಿಸಿದ ಪ್ಲಾಸ್ಟಿಕ್ ಫಿಲಂ ರೋಲ್‌ನೊಂದಿಗೆ 8 ನಕಲಿ ಕಾರಿನ ಸಂಖ್ಯಾ ಫಲಕಗಳು ಪತ್ತೆಯಾಗಿದ್ದು ಜಪ್ತಿಪಡಿಸಲಾಗಿರುವ ವಾಹನಕ್ಕೂ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿರುವುದನ್ನು ಗಮನಿಸಿದರೆ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆ ಮಾಡುವ ಏಕೈಕ ಉದ್ದೇಶದಿಂದಲೇ ನಕಲಿ ಸಂಖ್ಯಾ ಫಲಕವನ್ನು ವಾಹನಕ್ಕೆ ಅಳವಡಿಸಿ ಅಕ್ರಮ ಸಾರಾಯಿ ತಯಾರಿಕೆ ಹಾಗೂ ಅಕ್ರಮವಾಗಿ ಸಾರಾಯಿ ಸಾಗಣೆ ಮಾಡುತ್ತಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನದಲ್ಲಿ ಅಕ್ರಮ ಸಾರಾಯಿ ಸಾಗಣೆ ಆಗಿರುವುದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರವು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಮೊಕದ್ದಮೆ ಸಂಖ್ಯೆ: 50/2000-01 ದಿನಾಂಕ:16.6.2001ರಲ್ಲಿ ವಶಪಡಿಸಿಕೊಂಡಿರುವ ವಾಹನ ಮಾರುತಿ ಕಾರು ಸಂ: ಕೆಎ-19-ಎಂ-5525 ಇಂಜಿನ್ ಸಂಖ್ಯೆ: ಎಫ್8 ಬಿಐಎಸ್:922647, ಚಾಸಿಸ್ ಸಂಖ್ಯೆ:ಎಸ್.ಬಿ.308:ಐಎನ್:614655 (ನಕಲಿ ಸಂಖ್ಯೆ: ಕೆಎ 18-ಎಂ-5263) ನ್ನು ನಿಯಮ 43ಎ (2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ:21.10.2004 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಪಿ.ಆರ್. 1558 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ-ಸಿಓಎನ್-ಸಿಆರ್-19/95-96, ದಿನಾಂಕ: 8ನೇ ಸೆಪ್ಟೆಂಬರ್ 2004**

**ನಿರೂಪಣಾಧಿಕಾರಿಗಳು** : ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ.,
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ಫಿರ್ಯಾದುದಾರರು** : ಆರಕ್ಷಕ ನಿರೀಕ್ಷಕರು,
ತರೀಕೆರೆ ವೃತ್ತ, ಚಿಕ್ಕಮಗಳೂರು ಜಿಲ್ಲೆ.

**ಅರ್ಜಿದಾರರು** : ಸುರೇಶ್ ಬಾಬು, ಮೇಜರ್,
ಆರ್.ಪಿ. ನಂ: 5, 34ನೇ ತಿರುವು, IIನೇ ಮುಖ್ಯರಸ್ತೆ, ಜೋಗನಹಳ್ಳಿ, IIನೇ ಹಂತ,
ರಾಜಾಜಿನಗರ, ಬೆಂಗಳೂರು-10.

**ಪ್ರಕರಣದ ಹಿನ್ನೆಲೆ:**

ದಿನಾಂಕ: 1.8.95 ರಂದು ಪೊಲೀಸ್ ವೃತ್ತ ನಿರೀಕ್ಷಕರು, ತರೀಕೆರೆ ಮತ್ತು ಸಿಬ್ಬಂದಿಯವರು ಲಿಂಗದಹಳ್ಳಿ ಠಾಣೆ ಮೊ.ನಂ: 87/95 ರಲ್ಲಿ ತನಿಖೆಯ ಬಗ್ಗೆ ಕೆಮ್ಮಣ್ಣುಗುಂಡಿಗೆ ಹೋಗಿ ತನಿಖೆಯನ್ನು ಮುಗಿಸಿಕೊಂಡು ವಾಪಸ್ಸು ಬರುತ್ತಿರುವಾಗ ಕಲ್ಲತ್ತಿಪುರದಲ್ಲಿ ಇರುವ ಸ್ಮಶಾನದ ಪಕ್ಕ ಒಂದು ವ್ಯಾನ್ ನಿಂತಿದ್ದು, ಪಕ್ಕದಲ್ಲಿ ಮರದ ತುಂಡುಗಳು ಇದ್ದು ನೋಡಲಾಗಿ ವ್ಯಾನ್‌ಗೆ ಸಾಗುವಾನಿ ಮರದ ತುಂಡುಗಳನ್ನು ತುಂಬಿದ್ದು ಮೂರು ಜನರನ್ನು ಹಿಡಿದುಕೊಂಡು ಕೇಳಲಾಗಿ 1) ರಾಜ 2) ತಿಮ್ಮಣ್ಣ, ಜಯಪುರ ವಾಸಿ ಮತ್ತು ಮಂಜ ವ್ಯಾನಿನ ಕಂಡಕ್ಟರ್ ಅಂತ ತಿಳಿಸಿದ್ದು, ಇನ್ನು 4-5 ಜನರು ತಪ್ಪಿಸಿಕೊಂಡು ಹೋಗಿದ್ದು, ವ್ಯಾನ್ ನಂಬರ್ ನೋಡಲಾಗಿ ಕೆಎ-03-1694 ಆಗಿದ್ದು, ಸದರಿ ವ್ಯಾನಿನಲ್ಲಿ ಒಟ್ಟು 6 ಸಾಗುವಾನಿ ತುಂಡುಗಳನ್ನು ತುಂಬಿದ್ದು, ವ್ಯಾನ್ ಮತ್ತು ಆರೋಪಿಗಳನ್ನು ದಸ್ತಗಿರಿ ಮಾಡಿಕೊಂಡು ಠಾಣೆಗೆ ಬಂದು ಲಿಂಗದಹಳ್ಳಿ ಠಾಣೆ ಮೊ.ನಂ: 92/95ರ ರೀತ್ಯಾ ಕೇಸು ದಾಖಲು ಮಾಡಿದ್ದು, ಸದರಿ ಕೇಸಿನ ತನಿಖೆಯನ್ನು ಕೈಗೊಂಡಿರುತ್ತಾರೆ.

ಸದರಿ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡಿರುವ 6 ಸಾಗುವಾನಿ ತುಂಡುಗಳು ಮತ್ತು ವ್ಯಾನ್ ನಂ: ಕೆಎ-03-1694 ನ್ನು ಅರಣ್ಯ ಇಲಾಖಾ ವಶಕ್ಕೆ ತೆಗೆದುಕೊಳ್ಳಲು ಕೋರಿರುತ್ತಾರೆ. ಆರಕ್ಷಕ ನಿರೀಕ್ಷಕರು, ತರೀಕೆರೆ ವೃತ್ತ, ಚಿಕ್ಕಮಗಳೂರು ಜಿಲ್ಲೆ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು 379 ಐ ಪಿ ಸಿ ಮತ್ತು 24 ಕೆ ಎಫ್ ಆಕ್ಟ್ ಜೊತೆಗೆ 144 ಕೆ ಎಫ್ ರೂಲ್ಸ್ ಹಾಗೂ 71(ಎ) ಪ್ರಕಾರ ಕ್ರಮ ಜರುಗಿಸಿ, ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ವಶಕ್ಕೆ ದಿನಾಂಕ: 13.9.95 ರಂದು ಸುರಕ್ಷತೆಗಾಗಿ ನೀಡಿರುತ್ತದೆ.

ದಿನಾಂಕ 14.9.95 ರಂದು ವಾಹನದ ಮಾಲೀಕರಾದ ಶ್ರೀ ಸುರೇಶ್ ಬಾಬು ನಂ:5, 34ನೇ ಕ್ರಾಸ್ 11ನೇ ಮುಖ್ಯರಸ್ತೆ, ಜೋಗನಹಳ್ಳಿ, II ಸ್ಟೇಜ್, ರಾಜಾಜಿನಗರ, ಬೆಂಗಳೂರು-10 ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ದಿನಾಂಕ 24.7.95 ರಂದು ನನ್ನ ವಾಹನ ಮೆಟಡೋರ್ ವ್ಯಾನ್ ಸಂಖ್ಯೆ: ಕೆಎ-03-1694 ನ್ನು ಮನೆಯ ಮುಂದೆ ನಿಲ್ಲಿಸಿದ್ದು, ಬೆಳಿಗ್ಗೆ ನೋಡಿದಾಗ ನನ್ನ ವಾಹನ ಮನೆಯ ಮುಂದೆ ಇರಲಿಲ್ಲ. ಆ ದಿನ ಹುಡುಕಾಡಿ ನಂತರ ಅದೇ ದಿವಸ ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಫಿರ್ಯಾದನ್ನು ನೀಡಿರುತ್ತೇನೆ. ಸದರಿ ಫಿರ್ಯಾದಿಯು ಕಲಂ 379 ರ ಭಾರತೀಯ ದಂಡ ಸಂಹಿತೆಯ ಪ್ರಕಾರ ಸಿಆರ್ ನಂ: 266/95 ರಲ್ಲಿ ಫಿರ್ಯಾದಿಯನ್ನು ಸ್ವೀಕರಿಸಿ ಕೇಸನ್ನು ದಾಖಲು ಮಾಡಿರುತ್ತಾರೆ.

ರಾಜಾಜಿನಗರ ಪೊಲೀಸ್ ಠಾಣೆಯ ಆರಕ್ಷಕರು ಸದರಿ ಮೆಟಡೋರ್ ವಾಹನವನ್ನು ಹುಡುಕುವುದಾಗಿ ಭರವಸೆಯನ್ನು ಕೊಟ್ಟರು, ನಂತರ ಸದರಿ ವಾಹನವನ್ನು ಆರಕ್ಷಕ ಉಪ ನಿರೀಕ್ಷಕರು, ಲಿಂಗದಹಳ್ಳಿ ಪೊಲೀಸ್ ಠಾಣೆಯವರು ದಿನಾಂಕ: 1.8.95ರ ರಾತ್ರಿ ಕಲ್ಲತ್ತಿಗಿರಿ ಕ್ರಾಸ್‌ನ ಹತ್ತಿರ ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದಾರೆಂದು, ಸದರಿ ವಾಹನವನ್ನು ಪೊಲೀಸರು ವಶಪಡಿಸಿಕೊಂಡು ಹಾಗೂ ಸದರಿ ವಾಹನದಲ್ಲಿದ್ದ ಮಂಜ, ರಾಜ ಮತ್ತಿತರರನ್ನು ದಸ್ತಗಿರಿ ಮಾಡಿ ಠಾಣೆಯ ಗುನ್ನೆ ನಂ: 52/95ರ ಅಡಿಯಲ್ಲಿ ಕಲಂ 379ರ ಭಾರತೀಯ ದಂಡ ಸಂಹಿತೆ ಹಾಗೂ 24 ಸೆಕ್ಷನ್ ರ ಅರಣ್ಯ ಕಾಯ್ದೆಯಡಿಯಲ್ಲಿ ಕೇಸನ್ನು ದಾಖಲು ಮಾಡಿ ವಾಹನವನ್ನು ಹಾಗೂ ಮೇಲ್ಕಂಡ ವ್ಯಕ್ತಿಗಳನ್ನು ಬಂಧಿಸಿ ಲಿಂಗದಹಳ್ಳಿ ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡಿರುತ್ತಾರೆ. ಈ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ, ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಸದರಿ ಅರ್ಜಿದಾರರಿಗೆ ಈ ನ್ಯಾಯಾಲಯದಿಂದ ದಿನಾಂಕ 6-10-95 ರಂದು ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ಹೊರಡಿಸಿ ಅರ್ಜಿದಾರರು ಸಮಜಾಯಿಸಿಯನ್ನು ನೀಡಲು ಸೂಚಿಸಿರುತ್ತದೆ. ಸದರಿ ಅರ್ಜಿದಾರರು ದಿನಾಂಕ: 7.10.95ರ ಪತ್ರದಲ್ಲಿ ಈ ನ್ಯಾಯಾಲಯದ ಕಾರಣ ಕೇಳಿ ತಿಳುವಳಿಕೆ ಪತ್ರಕ್ಕೆ ಸಮಜಾಯಿಸಿ ನೀಡಿರುತ್ತಾರೆ. ಅವರ ಸಮಜಾಯಿಸಿ ಹೇಳಿಕೆ ಪ್ರಕಾರ ಸದರಿ ಅರ್ಜಿದಾರರು ಮೆಟಡೊರ್ ವ್ಯಾನ್ ನಂ: ಕೆಎ-03-1694ರ ಮಾಲೀಕರೆಂದು ಸದರಿ ವಾಹನವನ್ನು ಅರ್ಜಿದಾರರ ಜೀವನೋಪಾಯಕ್ಕಾಗಿ ಬಾಡಿಗೆಗೆ ಓಡಿಸುತ್ತಿರುತ್ತಾರೆಂದೂ, ಸದರಿ ವಾಹನವನ್ನು ತಮ್ಮ ಮನೆಯ ಹತ್ತಿರ ದಿನಾಂಕ: 24.7.95 ರಂದು ತಮ್ಮ ಮನೆಯ ಮುಂದೆ ನಿಲ್ಲಿಸಿದ್ದರೆಂದು, ಆದರೆ ದಿನಾಂಕ 25.7.95 ರಂದು ಬೆಳಿಗ್ಗೆ ಎದ್ದು ನೋಡಿದಾಗ ಸದರಿ ವಾಹನವು ಮನೆಯ ಹತ್ತಿರ ಇರಲಿಲ್ಲ. ಅರ್ಜಿದಾರರು ತಮ್ಮ ಮನೆಯ ಸುತ್ತ ಮುತ್ತ ಹುಡುಕಿ ಅದೇ ದಿನ ಕೊನೆಗೆ ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಫಿರ್ಯಾದನು ನೀಡಿರುತ್ತಾರೆಂದು, ಪೊಲೀಸರು ಅವರ ಫಿರ್ಯಾದನ್ನು ಸ್ವೀಕರಿಸಿ ಕಲಂ 379ರ ಭಾರತೀಯ ದಂಡ ಸಂಹಿತೆಯ ಪ್ರಕಾರ ಸಿಆರ್ ನಂ: 266/95 ರಲ್ಲಿ ಫಿರ್ಯಾದನ್ನು ಸ್ವೀಕರಿಸಿ ಕೇಸನ್ನು ದಾಖಲು ಮಾಡಿರುತ್ತಾರೆ. ತದ ನಂತರ, ಸದರಿ ರಾಜಾಜಿನಗರ ಪೊಲೀಸ್ ಠಾಣೆಯ ಆರಕ್ಷಕರು ಸದರಿ ಮೆಟಡೋರ್ ವಾಹನವನ್ನು ಹುಡುಕುವುದಾಗಿ ಭರವಸೆಯನ್ನು ಕೊಟ್ಟರು. ಸದರಿ ವಾಹನವನ್ನು ಆರಕ್ಷಕ ಉಪ ನಿರೀಕ್ಷಕರು, ಲಿಂಗದಹಳ್ಳಿ ಪೊಲೀಸ್ ಠಾಣೆಯವರು ದಿನಾಂಕ 1.8.1995ರ ರಾತ್ರಿ ಕಲ್ಲತ್ತಿಗಿರಿ ಕ್ರಾಸ್‌ನ ಹತ್ತಿರ ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದರೆಂದು ಸದರಿ ವಾಹನವನ್ನು ಪೊಲೀಸರು ವಶಪಡಿಸಿಕೊಂಡು ಹಾಗೂ ಸದರಿ ವಾಹನದಲ್ಲಿದ್ದ ಮಂಜ, ರಾಜ ಮತ್ತಿತ್ತರರನ್ನು ದಸ್ತಗಿರಿ ಮಾಡಿ ಠಾಣೆಯ ಗುನ್ನೆ ನಂ: 92/95ರ ಅಡಿಯಲ್ಲಿ ಕಲಂ 379ರ ಭಾರತೀಯ ದಂಡ ಸಂಹಿತೆಯ ಹಾಗೂ 24 ಸೆಕ್ಷನ್ ರ ಅರಣ್ಯ ಕಾಯ್ದೆ ಅಡಿಯಲ್ಲಿ ಕೇಸನ್ನು ದಾಖಲು ಮಾಡಿ ವಾಹನವನ್ನು ಹಾಗೂ ಮೇಲ್ಕಂಡ ವ್ಯಕ್ತಿಗಳನ್ನು ಬಂಧಿಸಿ ಸದರಿ ಲಿಂಗದಹಳ್ಳಿ ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡಿರುತ್ತಾರೆ. ಮೇಲ್ಕಂಡ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧವಿಲ್ಲ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಸಾಗಾಣಿಕೆ ಆದ ಬಗ್ಗೆ ಯಾವುದೇ ತಿಳುವಳಿಕೆ ಇರುವುದಿಲ್ಲವೆಂದು, ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಂಡಲ್ಲಿ ತುಂಬಲಾದ ನಷ್ಟ ಹಾಗೂ ಅವರ ಜೀವನೋಪಾಯಕ್ಕೆ ತೊಂದರೆಯಾಗುವುದಾಗಿ ಸದರಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿಕೊಂಡಿರುತ್ತಾರೆ.

ಈ ಪ್ರಕರಣದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ಇವರು ದಿನಾಂಕ 21.10.95 ರಂದು ಅಭಿಯೋಜನೆವತಿಯಿಂದ ಆಕ್ಷೇಪಣಾ ಪತ್ರ ಸಲ್ಲಿಸಿರುತ್ತಾರೆ. ಅಭಿಯೋಜನೆವತಿಯ ಆಕ್ಷೇಪಣೆ ಪತ್ರದ ಪ್ರಕಾರ ಸದರಿ ಪ್ರಕರಣದಲ್ಲಿ ತರೀಕೆರೆ ಪೊಲೀಸರು ಮೇಲ್ಕಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಅಮಾನತ್ತುಪಡಿಸಿಕೊಂಡು ಆರೋಪಿಗಳ ವಿರುದ್ಧ ಕಲಂ 379 ರ ಭಾರತೀಯ ದಂಡ ಸಂಹಿತೆಯ ಪ್ರಕಾರ ಸಿಆರ್ ನಂ: 266/95 ರಲ್ಲಿ ಮೊಕದ್ದಮೆ ದಾಖಲು ಮಾಡಿ ಈ ಘನ ನ್ಯಾಯಾಲಯಕ್ಕೆ ಕಳುಹಿಸಿಕೊಟ್ಟಿರುತ್ತಾರೆಂದು, ಅರ್ಜಿದಾರರ ವಾಹನವು ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆಯಲ್ಲಿ ತೊಡಗಿಸಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆಂದು ಅರ್ಜಿದಾರರ ವಾಹನ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಪುರಾವೆಯಾಗಿರುತ್ತದೆಂದು ಈ ಕಾರಣಗಳಿಂದ ಅರ್ಜಿದಾರರ ವಾಹನ ಮೇಲ್ಕಂಡ ಕೃತ್ಯದಲ್ಲಿ ಭಾಗಿಯಾಗಿರುವುದು ಸಾಬೀತಾಗಿರುತ್ತದೆಂದು ಈ ಹಂತದಲ್ಲಿ ಬಿಡುಗಡೆ ಮಾಡಿದ್ದೇ ಆಗಿದ್ದಲ್ಲಿ ಪುನಃ ಇದೇ ರೀತಿಯ ಕೃತ್ಯಗಳಿಗೆ ವಾಹನವನ್ನು ತೊಡಗಿಸುವ ಸಾಧ್ಯತೆ ಹೆಚ್ಚಾಗಿರುತ್ತದೆಂದು ಅರ್ಜಿದಾರರ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಲು ಕೋರಿರುತ್ತಾರೆ.

ಸದರಿ ಪ್ರಕರಣದಲ್ಲಿ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ ದಿನಾಂಕ 30.12.95 ರಂದು ವಿಚಾರಣೆ ನಡೆಸಿರುತ್ತದೆ. ಸದರಿ ದಿನಾಂಕದಂದು ಸರ್ಕಾರಿ ಅಭಿಯೋಜಕರವರು ಮಧ್ಯಂತರ ಅರ್ಜಿಯ ಬಗ್ಗೆ ವಾದ ವಿವಾದವನ್ನು ಮಂಡಿಸಿದ್ದು ಅದನ್ನು ಆಲಿಸಿರುತ್ತದೆ. ಅರ್ಜಿದಾರರು ಮೇಲ್ಕಂಡ ಮೊಕದ್ದಮೆಯಲ್ಲಿ ಭಾಗಿಯಾಗಿಲ್ಲವೆಂದು ಅವರ ಜೀವನ ನಿರ್ವಹಣೆಗೆ ಮೇಲ್ಕಂಡ ವಾಹನದ ಅವಶ್ಯಕತೆ ಇರುತ್ತದೆಂದು, ಸದರಿ ವಾಹನವು ಅರಣ್ಯ ಮೊಕದ್ದಮೆಯಲ್ಲಿ ಸಿಕ್ಕಿರುವುದು ಕಂಡುಬಂದಿರುತ್ತದೆಂದು ಈ ಕೃತ್ಯಕ್ಕೂ ಅರ್ಜಿದಾರರಿಗೂ ಯಾವುದೇ ಸಂಬಂಧವಿಲ್ಲವೆಂದು ಈ ಕಾರಣಗಳಿಂದ ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಅರ್ಜಿದಾರರ ಪರ ವಕೀಲರು ವಾದ ಮಂಡಿಸಿರುತ್ತಾರೆ. ಇದಕ್ಕೆ ಪ್ರತಿಯಾಗಿ ಅಭಿಯೋಜನೆವತಿಯಿಂದ ಈ ಮೊಕದ್ದಮೆಯಲ್ಲಿ ಅರ್ಜಿದಾರರು ಶಾಮೀಲಾಗಿರುವುದು ಕಂಡುಬರುತ್ತದೆಂದು ಆರೋಪಿಗಳನ್ನು ಬಂಧಿಸಿ ಪೊಲೀಸಿನವರು ಮೊಕದ್ದಮೆ ದಾಖಲು ಮಾಡಿರುವುದಾಗಿ, ವಾಹನವನ್ನು ಬಿಡುಗಡೆ ಮಾಡಿದ್ದೇ ಆದಲ್ಲಿ ಪುನಃ ಇದೇ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆ ಇರುತ್ತದೆಂದು, ವಾಹನ ಮಾಲೀಕರು ಮೋಟಾರು ವಾಹನ ಕಾಯ್ದೆಯನ್ವಯ ವಾಹನವನ್ನು ದಿನನಿತ್ಯ ಬಾಡಿಗೆಗೆ ಕಳುಹಿಸುವ ಬಗ್ಗೆ ಚಾಲನೆ ವಹಿ ಇಡಬೇಕಾಗಿದ್ದು, ಅವರು ಅದನ್ನು ಇಟ್ಟಿಲ್ಲವೆಂದು ಪ್ರತಿವಾದ ಮಂಡಿಸಿರುತ್ತಾರೆ. ಮೇಲ್ಕಂಡ ಎಲ್ಲಾ ವಿಷಯಗಳನ್ನು ಅವಲೋಕಿಸಿ ನೋಡಲಾಗಿ ಅರ್ಜಿದಾರರು ಮೇಲ್ಕಂಡ ವಾಹನವನ್ನು ಬೀಟೆ ಮತ್ತು ಸಾಗುವಾನಿ ತುಂಡುಗಳ ಅಕ್ರಮ ಸಾಗಾಣಿಕೆಗೆ ತೊಡಗಿಸುವಲ್ಲಿ ಯಾವುದೇ ಮುಂಜಾಗ್ರತೆ ಕ್ರಮ ಕೈಗೊಂಡಿರುವುದಿಲ್ಲ ಹಾಗೂ ವಾಹನವನ್ನು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿಸಿಲ್ಲ ಎಂದು ಪುರಾವೆ ಒದಗಿಸುವಲ್ಲಿ ವಿಫಲರಾಗಿರುತ್ತಾರೆ. ಅರ್ಜಿದಾರರು ಸದರಿ ವಾಹನವನ್ನು ಬಾಡಿಗೆಗೆ ಯಾರಿಗೆ ಕೊಟ್ಟಿರುತ್ತಾರೆ ಎಂಬುದನ್ನು ನಿರೂಪಿಸಿರುವುದಿಲ್ಲ. ಅರ್ಜಿದಾರರ ವಾಹನ ಮನೆಯ ಮುಂದೆ ನಿಲ್ಲಿಸಿದ್ದು, ಕಾಣೆಯಾಗಿರುತ್ತದೆ ಎಂಬುದಾಗಿ ಅರ್ಜಿದಾರರ ವಕೀಲರು ವಾದ ಮಂಡಿಸಿದ್ದು, ಅರ್ಜಿದಾರರು ಆರೋಪಿಗಳ ಜೊತೆ ಸೇರಿ ಕಳ್ಳ ಸಾಗಾಣಿಕೆಯಲ್ಲಿ ಮೇಲ್ಕಂಡ ವಾಹನವನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ ಹಾಗೂ ಸದರಿ ಪ್ರಕರಣದಲ್ಲಿ ಪೂರ್ಣ ವಿಚಾರಣೆ ಅವಶ್ಯವಿರುತ್ತದೆ. ಆದುದರಿಂದ ಮೆಟಡೋರ್ ವ್ಯಾನ್ ಸಂಖ್ಯೆ:ಕೆಎ-03-1694 ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಕೋರಿರುವ ಮಧ್ಯಂತರ ಅರ್ಜಿಯನ್ನು ಮೇಲ್ಕಂಡ ಕಾರಣಗಳಿಂದ ದಿನಾಂಕ 30.12.95 ರಂದು ತಿರಸ್ಕರಿಸಲಾಗಿದೆ.

ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಶಿವಮೊಗ್ಗ ಸೆಷನ್ಸ್ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ವಾಹನವನ್ನು ರೂ. 2.00 ಲಕ್ಷ ಬ್ಯಾಂಕ್ ಗ್ಯಾರಂಟಿ ಹಾಗೂ ಒಬ್ಬರು ಸಾಲ್ವೆಂಟ್ ಶ್ಯೂರಿಟಿ ಪಡೆದು ಬಿಡುಗಡೆ ಮಾಡಲು ಕ್ರಿಮಿನಲ್ ಮಿಸ್ ಅಪೀಲ್ ನಂ:1/96 ದಿನಾಂಕ: 20.1.96 ರಂದು ಆದೇಶಿಸಿರುತ್ತದೆ. ವಾಹನದ ಮಾಲೀಕರು ಶಿವಮೊಗ್ಗ ಸೆಷನ್ಸ್ ನ್ಯಾಯಾಲಯದ ಆದೇಶದಂತೆ ಇಂಡೆಮ್ನಿಟಿ ಬಾಂಡನ್ನು ಷರತ್ತುಗಳ ಮೂಲಕ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಪ್ರಕರಣದ ವಿಚಾರಣೆಯನ್ನು 4.5.96 ರಿಂದ 7.4.2004 ರವರೆಗೆ ಹಲವಾರು ದಿನಾಂಕಗಳಂದು ನಡೆಸಲಾಯಿತು. ಅಭಿಯೋಜನೆಯ ಸಾಕ್ಷಿದಾರರಿಗೆ ಹಾಗೂ ವಾಹನದ ಮಾಲೀಕರಿಗೆ ನ್ಯಾಯಾಲಯಕ್ಕೆ ಹಾಜರಾಗಲು ನೋಟೀಸ್ ನೀಡಿರುತ್ತದೆ. ಅಭಿಯೋಜನಾ ಸಾಕ್ಷಿದಾರರಾದ ಶ್ರೀ ಡಿ.ಎಸ್. ಪಾಪಣ್ಣ, ಪಿ.ಎಸ್.ಐ, ಯಗಟಿ ಪೊಲೀಸ್ ಸ್ಟೇಷನ್, ಕಡೂರು ತಾಲ್ಲೂಕು, ಇವರು ದಿನಾಂಕ: 19.12.2001 ರಂದು, ಶ್ರೀ ಎಂ.ಹೆಚ್. ಜಯಕುಮಾರ್, ವೃತ್ತ ನಿರೀಕ್ಷಕರು, ತರೀಕೆರೆ ವೃತ್ತ ಇವರು ದಿನಾಂಕ: 3.4.2002 ರಂದು, ಹಾಗೂ ಶ್ರೀ ಜಿ.ಎಂ. ಖಾಸಿಮ್, ಪಿ.ಎಸ್.ಐ, ತರೀಕೆರೆ ಇವರು ದಿನಾಂಕ: 6.2.02 ರಂದು ಮತ್ತು ನರಸಿಂಹಮೂರ್ತಿ, ಬಿನ್ ಚೌಡಪ್ಪ, ವ್ಯವಸಾಯಗಾರರು, ಕಲ್ಲತ್ತಿಪುರ ಇವರು ದಿನಾಂಕ:16.10.2002 ರಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗದೇ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ವಾಹನದ ಮಾಲೀಕರ ಪರ ಅವರ ವಕೀಲರು ಪ್ರಕರಣದ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳನ್ನು ಸಹ ಹಾಜರುಪಡಿಸಿರುವುದಿಲ್ಲ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ-1**

ವಾಹನ ಮೆಟಡೋರ್ ವ್ಯಾನ್ ಸಂಖ್ಯೆ: ಕೆಎ-03-1694ನ್ನು ದಿನಾಂಕ: 1.8.95 ರಂದು ಆರು ಸಾಗುವಾನಿ ತುಂಡುಗಳ ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ?

**ಅಂಶ-2**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾಧವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ವಾಹನ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂದು ಡಿಫೆನ್ಸ್‌ರವರು ರುಜುವಾತುಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಧ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತುಪಡಿಸಿರುತ್ತಾರೆಯೇ?

**ಅಂಶ-3:**

ಆದೇಶವೇನು?

**ಅಂಶ-1**

ದಿನಾಂಕ: 1.8.95 ರಂದು ಪೊಲೀಸ್ ವೃತ್ತ ನಿರೀಕ್ಷಕರು, ತರೀಕೆರೆ ಮತ್ತು ಸಿಬ್ಬಂದಿಯವರು ಲಿಂಗದಹಳ್ಳಿ ಠಾಣೆ ಮೊ.ನಂ: 87/95 ರಲ್ಲಿ ತನಿಖೆಯ ಬಗ್ಗೆ ಕೆಮ್ಮಣ್ಣುಗುಂಡಿಗೆ ಹೋಗಿ ತನಿಖೆಯನ್ನು ಮುಗಿಸಿಕೊಂಡು ವಾಪಸ್ಸು ಬರುತ್ತಿರುವಾಗ ಕಲ್ಲತ್ತಿಪುರದಲ್ಲಿ ಇರುವ ಸ್ಮಶಾನದ ಪಕ್ಕ ಒಂದು ವ್ಯಾನ್ ನಿಂತಿದ್ದು, ಪಕ್ಕದಲ್ಲಿ ಮರದ ತುಂಡುಗಳು ಇದ್ದು ನೋಡಲಾಗಿ ವ್ಯಾನ್‌ಗೆ ಸಾಗುವಾನಿ ಮರದ ತುಂಡುಗಳನ್ನು ತುಂಬಿದ್ದು ಮೂರು ಜನರನ್ನು ಹಿಡಿದುಕೊಂಡು ಕೇಳಲಾಗಿ 1) ರಾಜ 2) ತಿಮಣ್ಣ, ಜಯಪುರ ವಾಸಿ ಮತ್ತು ಮಂಜ ವ್ಯಾನಿನ ಕಂಡಕ್ಟರ್ ಅಂತ ತಿಳಿಸಿದ್ದು, ಇನ್ನು 4-5 ಜನರು ತಪ್ಪಿಸಿಕೊಂಡು ಹೋಗಿದ್ದು, ವ್ಯಾನ್ ನಂಬರ್ ನೋಡಲಾಗಿ ಕೆಎ-03-1694 ಆಗಿದ್ದು, ಸದರಿ ವ್ಯಾನಿನಲ್ಲಿ ಒಟ್ಟು 6 ಸಾಗುವಾನಿ ತುಂಡುಗಳನ್ನು ತುಂಬಿದ್ದು, ವ್ಯಾನ್ ಮತ್ತು ಆರೋಪಿಗಳನ್ನು ದಸ್ತಗಿರಿ ಮಾಡಿಕೊಂಡು ಠಾಣೆಗೆ ಬಂದು ಲಿಂಗದಹಳ್ಳಿ ಠಾಣೆ ಮೊ.ನಂ:92/95ರ ರೀತ್ಯಾ ಕೇಸು ದಾಖಲು ಮಾಡಿದ್ದು, ಸದರಿ ಕೇಸಿನ ತನಿಖೆಯನ್ನು ಕೈಗೊಂಡಿರುತ್ತಾರೆ.

ಸದರಿ ಕೇಸಿನಲ್ಲಿ ಅಮಾನತ್ತುಪಡಿಸಿಕೊಂಡಿರುವ 6 ಸಾಗುವಾನಿ ತುಂಡುಗಳು ಮತ್ತು ವ್ಯಾನ್ ನಂ: ಕೆಎ-03-1694ನ್ನು ಅರಣ್ಯ ಇಲಾಖಾ ವಶಕ್ಕೆ ತೆಗೆದುಕೊಳ್ಳಲು ಕೋರಿರುತ್ತಾರೆ. ಆರಕ್ಷಕ ನಿರೀಕ್ಷಕರು, ತರೀಕೆರೆ ವೃತ್ತ, ಚಿಕ್ಕಮಗಳೂರು ಜಿಲ್ಲೆ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು 379 ಐ ಪಿ ಸಿ ಮತ್ತು 24 ಕೆ ಎಫ್ ಆಕ್ಟ್ ಜೊತೆಗೆ 144 ಕೆ ಎಫ್ ರೂಲ್ಸ್ ಹಾಗೂ 71(ಎ) ಪ್ರಕಾರ ಕ್ರಮ ಜರುಗಿಸಿ, ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ವಶಕ್ಕೆ ದಿನಾಂಕ 13.9.95 ರಂದು ಸುರಕ್ಷತೆಗಾಗಿ ನೀಡಿರುತ್ತದೆ. ಈ ಪ್ರಕರಣದಲ್ಲಿ ಅಭಿಯೋಜನಾ ಸಾಕ್ಷಿದಾರರು ಈ ನ್ಯಾಯಾಲಯದಲ್ಲಿ ಮೇಲ್ಕಂಡ ದಿನಾಂಕಗಳಂದು ಈ ಕೆಳಕಂಡಂತೆ ಸಾಕ್ಷಿ ನುಡಿದು ದಾಖಲಾತಿಗಳನ್ನು ಗುರುತಿಸಿಕೊಂಡಿರುತ್ತಾರೆ. ಪಿಡಬ್ಲ್ಯೂ-1, ಪಿಡಬ್ಲ್ಯೂ-2, ಪಿಡಬ್ಲ್ಯೂ-3 ಸಾಕ್ಷಿದಾರರು ಹಾಗೂ ಪಿಡಬ್ಲ್ಯೂ-4 ಸ್ವತಂತ್ರ ಸಾಕ್ಷಿದಾರರು ಈ ಕೆಳಕಂಡಂತೆ ಸಾಕ್ಷಿ ನುಡಿದಿರುತ್ತಾರೆ.

ದಿನಾಂಕ 1.8.95 ರಂದು ತರೀಕೆರೆ ಪೊಲೀಸ್ ಠಾಣೆ ಸಿಬ್ಬಂದಿಯವರು ಕ್ರೈ ಸಂಖ್ಯೆ: 87/95ರ ತನಿಖೆಗೋಸ್ಕರ ಕೆಮಣ್ಣುಗುಂಡಿಗೆ ಹೋಗಿ ವಾಪಸ್ಸು ರಾತ್ರಿ 9-30 ರ ಸುಮಾರಿಗೆ ಲಿಂಗದಹಳ್ಳಿಗೆ ವಾಪಸ್ಸು ಬರುತ್ತಿರುವಾಗ ಕಲ್ಲತ್ತಿಗಿರಿ ಕ್ರಾಸ್‌ನಲ್ಲಿ ಒಂದು ವ್ಯಾನ್ ನಿಂತಿದ್ದು, ಅದಕ್ಕೆ ಒಂದು ಮರದ ದಿಮ್ಮಿಯನ್ನು ಹೇರಿರುವುದು ಹಾಗೂ ಅಲ್ಲಿಯೇ ಇದ್ದ ಸ್ಮಶಾನದ ಬಳಿ ಕೆಲವು ಜನರು ಕೆಲವು ಮರದ ದಿಮ್ಮಿಗಳನ್ನು ಉರುಳಿಸುತ್ತಿದ್ದುದ್ದು ಇಲಾಖಾ ಜೀಪು ಬೆಳಕಿನ ಸಹಾಯದಿಂದ ಕಂಡು ಬಂದಿದ್ದರಿಂದ ಜೀಪನ್ನು ನಿಲ್ಲಿಸುವಂತೆ ನಮ್ಮ ಜೀಪ್ ಚಾಲಕನಿಗೆ ಹೇಳಿದ್ದರಿಂದ ಜೀಪು ನಿಲ್ಲಿಸಿದ ತಕ್ಷಣ ಸಿಬ್ಬಂದಿಗೆ ಅವರನ್ನು ಹಿಡಿಯುವಂತೆ ಆದೇಶಿಸಿದಾಗ ಎ ಎಸ್ ಐ ನಾಗರಾಜ್, ಎ ಎಸ್ ಐ ಖಾಸಿಂ ಹಾಗೂ ಆರಕ್ಷಕ ನಂ: 159 ಮತ್ತು 207 ಹಾಗೂ ಜೀಪು ಚಾಲಕ ಸೇರಿ ಅವರಲ್ಲಿ 3 ಜನರನ್ನು ಹಿಡಿದರು. ಆ 3 ಜನರು ಅಂದರೆ ಒಬ್ಬ ಮಂಜ ಅನ್ನುವವನು ರಾಜ ಮತ್ತು ತಿಮ್ಮಣ್ಣ ಎಂತ ತಿಳಿದುಬಂತು. ಆ ಸಿಕ್ಕ ಮೂರು ಜನರನ್ನು ಸದರಿ ಮರದ ದಿಮ್ಮಿಗಳ ಸಾಗಾಣಿಕೆ ಬಗ್ಗೆ ಪರವಾನಿಗೆ ವಿಚಾರಿಸಲಾಗಿ ಅದಾವುದು ಇಲ್ಲ ಅಂತ ತಿಳಿಸಿದರು ಮತ್ತು ಇನ್ನೂ ಓಡಿ ಹೋದ 5 ಜನರ ಬಗ್ಗೆ ತಿಳಿಸಿದರು. ವ್ಯಾನಿನಲ್ಲಿ 1 ಮರದ ದಿಮ್ಮಿ ಇತ್ತು ಹಾಗೂ 5 ಮರದ ದಿಮ್ಮಿಗಳನ್ನು ಅಲ್ಲಿ ಉರುಳಿಸುತ್ತಿದ್ದರು. ಅಲ್ಲಿ ಒಟ್ಟು 6 ಸಾಗುವಾನಿ ಮರದ ದಿಮ್ಮಿಗಳು ಇದ್ದವು. ನಂತರ ಸ್ಥಳಕ್ಕೆ ಕಲ್ಲತ್ತಿಗಿರಿಯಿಂದ ಪಂಚರನ್ನು ಕರೆಸಿ ನಂತರ ಸಮಕ್ಷಮ ಪಂಚನಾಮೆಯನ್ನು ಜೀಪು ಬೆಳಕಿನ ಸಹಾಯದಿಂದ ಮಾಡಿ ಮರದ ದಿಮ್ಮಿಗಳಿಗೆ ಅಳತೆ ಮಾಡಿ ಕ್ರಮಸಂಖ್ಯೆ ಕೊಟ್ಟು ಅವುಗಳನ್ನು ವ್ಯಾನು ಸಂಖ್ಯೆ: ಕೆಎ-03-1694 ಸಮೇತ ಅಮಾನತ್ತುಪಡಿಸಿಕೊಂಡೆವು ಹಾಗೂ ಮರ ಕಡಿದ ಸ್ಥಳದಲ್ಲಿ ಬಿದಿದ್ದ ಮರದ ಹೊಟ್ಟನ್ನು ಸಹ ಅಮಾನತ್ತುಪಡಿಸಿಕೊಂಡೆವು. ಸದರಿ ಮಹಜರನ್ನು ನಿಶಾನೆ ಪಿ2 ಅಂತ ಗುರುತಿಸಲಾಗಿದ್ದು ಸಾಕ್ಷಿಯ ರುಜುವನ್ನು ಕ್ರಮಬದ್ದವಾಗಿ 2ಎ ಹಾಗೂ 2ಬಿ ಅಂತ ಗುರುತಿಸಲಾಯ್ತು. ನಂತರ ವ್ಯಾನು ಆಸಾಮಿಗಳನ್ನು ಹಾಗೂ ಮರದ ದಿಮ್ಮಿಗಳನ್ನು ಲಿಂಗದ ಹಳ್ಳಿಗೆ ತಂದು ಈ ಬಗ್ಗೆ ಎ ಎಸ್ ಐ ರವರಿಗೆ ನನ್ನ ಸ್ವಂತ ಫಿರ್ಯಾದನ್ನು ಸಲ್ಲಿಸಿ ಕೇಸನ್ನು ನೊಂದಾಯಿಸಿಕೊಳ್ಳುವಂತೆ ತಿಳಿಸಿದ್ದು, ಅದರಂತೆ ಪಿ.ಎಸ್.ಐ. ಪಾಪಣ್ಣ ಇವರು ಮೊಕದ್ದಮೆ ಸಂಖ್ಯೆ: 92/95 ರಲ್ಲಿ ಕೇಸನ್ನು ನೊಂದಾಯಿಸಿಕೊಂಡಿರುತ್ತಾರೆ. ಸದರಿ ಎಫ್.ಐ.ಆರ್. ನ್ನು ಪಿ1 ಹಾಗೂ ಸಾಕ್ಷಿದಾರರ ಸಹಿಯನ್ನು ಪಿ1ಎ ಎಂದು ಗುರುತಿಸಲಾಯಿತು. ವಾಹನವನ್ನು

ಹಾಗೂ ಮರದ ದಿಮ್ಮಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅರಣ್ಯ ಇಲಾಖೆಗೆ ವರದಿ ನೀಡಿರುತ್ತದೆ. ದಿನಾಂಕ: 11.8.95 ರಂದು ಆರೋಪಿ ಗೋವಿಂದಸ್ವಾಮಿ ಮತ್ತು ಶೇಖರ್ ಇವರ ಹೇಳಿಕೆ ಮೇರೆಗೆ ಆರೋಪಿ ಗೋವಿಂದಸ್ವಾಮಿ ಮನೆ ಮುಂದೆ ಹೋಗಿ ಅವರು ಮರ ಕಡಿಯಲು ಉಪಯೋಗಿಸಿದ್ದ ಗರಗಸ ಕತ್ತಿ ಕೊಡಲಿ ಮತ್ತು ಬ್ಯಾಟರಿಯನ್ನು ಪಂಚರ ಸಮಕ್ಷಮ ಅಮಾನತ್ತುಪಡಿಸಿಕೊಂಡಿರುತ್ತೇನೆ. ಆ ಬಗ್ಗೆ ಮಾಡಲಾದ ಮಹಜರನ್ನು ನಿಶಾನೆ ಪಿ3 ಅಂತ ಗುರುತಿಸಲಾಗಿದೆ ಹಾಗೂ ಸಾಕ್ಷಿಯ ರುಜುವನ್ನು 3ಎ ಅಂತ ಗುರುತಿಸಲಾಗಿದೆ. ಆ ದಿನ ವಶಪಡಿಸಿಕೊಳ್ಳಲಾದ 6 ಮರದ ದಿಮ್ಮಿಗಳನ್ನು ಹಾಗೂ ವ್ಯಾನನ್ನು ನೋಡಿದರೆ ಗುರುತಿಸುತ್ತೇನೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ಸಾಕ್ಷಿದಾರರು ಹೇಳಿಕೆ ನೀಡಿರುತ್ತಾರೆ. ನಮ್ಮ ತನಿಖೆ ಕಾಲಕ್ಕೆ ಮೇಲ್ಕಂಡ ವಾಹನವು ಬೆಂಗಳೂರು ರಾಜಾಜಿನಗರ ವ್ಯಾಪ್ತಿಯಲ್ಲಿ ಕಳುವು ಆಗಿತ್ತು ಅಂತ ತಿಳಿಯಿತು. ನಮ್ಮ ತನಿಖೆ ಕಾಲಕ್ಕೆ ಅಂದರೆ ವಾಹನವನ್ನು ಹಿಡಿದ ಕಾಲಕ್ಕೆ ಸಿಕ್ಕ ಮೂರು ಜನರಿಂದ ಓಡಿಹೋದವರ ಪೈಕಿ ವಾಹನದ ಚಾಲಕನು ಸಹ ಇದ್ದ ಎಂದು ತಿಳಿಯಿತು. ವಾಹನದ ಚಾಲಕನು ಸಹ ಇದರಲ್ಲಿ ಇದ್ದುದರಿಂದ ವಾಹನದ ಮಾಲೀಕರ ಪಾತ್ರ ಇರಬಹುದು ನಾವು ಯಾವುದೇ ಸ್ಥಳ ತನಿಖೆಯನ್ನು ಮಾಡಿಲ್ಲ ಅನ್ನುವುದು ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಹಾಗೂ ಸ್ವತಂತ್ರ ಸಾಕ್ಷಿದಾರರಾದ ಪಿಡಬ್ಲ್ಯೂ 4 ಇವರು ಸಾಕ್ಷಿ ನುಡಿದಿದ್ದು, ಅವರ ಸಾಕ್ಷಿ ಕೆಳಕಂಡಂತಿದೆ.

ನಾನು ಹುಟ್ಟಿ ಬೆಳೆದಿದ್ದು ಕಲ್ಲತ್ತಿಪುರದಲ್ಲಿ. ಕೆಮ್ಮಣ್ಣುಗುಂಡಿಯ ಕ್ರಿಸ್ತಿಯನ್ ಸ್ಮಶಾನ ನೋಡಿರುತ್ತೇನೆ. 4-5 ವರ್ಷದ ಹಿಂದೆ ಪೊಲೀಸರು ಮತ್ತು ಅರಣ್ಯ ಸಿಬ್ಬಂದಿಯವರು ನನ್ನನ್ನು ಕರೆದರು, ಮಹಜರ್‌ಗೆ ಸಹಿ ಮಾಡಲು ಹೇಳಿದರು ನಾನು ಮಾಡಿದೆ. ನನಗಿಂತ ಮೊದಲು ರಾಜ ಅವರು ಸಹಿ ಹಾಕಿದ್ದರು. ಯಾವುದರ ಬಗ್ಗೆ ಮಹಜರ್ ಮಾಡಿದೆ ಅಂತ ನಾನು ಕೇಳಲಿಲ್ಲ. ಕಲ್ಲತ್ತಿಪುರದಲ್ಲಿ ಬೇಸಾಯ ಮಾಡಿಕೊಂಡು ಇದ್ದೇನೆ. ಅಲ್ಲಿ ನನಗೆ 3 ಎಕರೆ ಜಮೀನು ಇದೆ. ಭತ್ತ, ರಾಗಿ ಎಲ್ಲವನ್ನು ಬೆಳೆಯುತ್ತಿದ್ದೇನೆ. ಸದರಿ ಸಾಕ್ಷಿ ಅಭಿಯೋಜನೆಯ ಪರ ಸಾಕ್ಷಿ ನುಡಿಯದ ಕಾರಣ ಸಾಕ್ಷಿಯನ್ನು ಪ್ರತಿಕೂಲ ಸಾಕ್ಷಿ ಎಂದು ಪರಿಗಣಿಸಿ ಪಾಟೀ ಸವಾಲು ಮಾಡಲು ಅಭಿಯೋಜಕರಿಗೆ ಅವಕಾಶ ನೀಡಲಾಯಿತು.

ಅಭಿಯೋಜನೆವತಿಯಿಂದ ಮಾಡಿದ ಪಾಟೀ ಸವಾಲಿನಲ್ಲಿ 2-3 ಜನ ಪೊಲೀಸ್‌ನವರು ನಿಂತಿದ್ದರು ಯಾರು ಅಂತ ಗೊತ್ತಾಗಲಿಲ್ಲ. ಪೊಲೀಸ್‌ನವರು ನನಗೆ ರಾತ್ರಿ 1.8.95 ರಂದು 1 ಗಂಟೆಗೆ ಕರೆಸಿದ್ದರು ಅನ್ನುವುದು ಸರಿಯಲ್ಲ. ನನಗೆ ಎಷ್ಟು ಗಂಟೆಗೆ ಕರೆದರು ಅನ್ನುವುದು ಗೊತ್ತಿಲ್ಲ. ಸದ ಸಂದರ್ಭದಲ್ಲಿ ಮೇಲೆ ಹೇಳಿದ ಸ್ಥಳದಲ್ಲಿ ಕೆಎ-03-1694 ವ್ಯಾನ್ ನಿಂತಿತ್ತು ಎನ್ನುವುದು ಗೊತ್ತಿಲ್ಲ. ಆಗ ಪೊಲೀಸ್‌ನವರ ವಶದಲ್ಲಿ ಮಂಜು ಬಿನ್ ನಾಗ್ಯಾನಾಯ್ಕ, ರಾಜ ಅಲಿಯಾಸ್ ಕೃಷ್ಣಮೂರ್ತಿ, ತಿಮ್ಮಣ್ಣ ಬಿನ್ ಕೆಂಚಪ್ಪ ಇದ್ದರು. ಆ ವ್ಯಾನಿನಲ್ಲಿ ಒಂದು ಮರದ ದಿಮ್ಮಿ ಲೋಡ್ ಆಗಿತ್ತು, ಇತರೆ ತುಂಡುಗಳು ಮರದ ಬುಡದ ಹತ್ತಿರ ಇದ್ದವು. ಮರದ ತುಂಡುಗಳನ್ನು ಮತ್ತು ವ್ಯಾನನ್ನು ನನ್ನ ಸಮಕ್ಷಮದಲ್ಲಿ ಅಮಾನತ್ತುಪಡಿಸಿಕೊಂಡರು ಅನ್ನುವುದು ಸರಿಯಲ್ಲ. ಜಮೀನಿಗೆ ಸಂಬಂಧಪಟ್ಟಂತೆ ಯಾವುದೇ ದಾಖಲಾತಿಗಳಿದ್ದರೂ ವಿಷಯ ತಿಳಿದೇ ಸಹಿ ಮಾಡುತ್ತೇನೆ ಅನ್ನುವುದು ಸರಿಯಲ್ಲ. ಕನ್ನಡ ಓದಲು ಬರೆಯಲು ಬರುವುದಿಲ್ಲ, ಆದರೆ ಸಹಿ ಮಾಡಲು ಮಾತ್ರ ಬರುತ್ತದೆ. ನನ್ನ ಸಮಕ್ಷಮ ವ್ಯಾನ್ ಮತ್ತು ಮರದ ತುಂಡುಗಳನ್ನು ಅಮಾನತ್ತುಪಡಿಸಿಕೊಂಡಿದ್ದಾರೆ ಅನ್ನುವುದು ಸರಿಯಲ್ಲ. ಉದ್ದೇಶಪೂರ್ವಕವಾಗಿ ಆರೋಪಿತರಿಗೆ ಸಹಾಯ ಮಾಡುತ್ತಿದ್ದೇನೆ ಅನ್ನುವುದು ಸರಿಯಲ್ಲ.

ಮೇಲ್ಕಂಡ ಪಿಡಬ್ಲ್ಯೂ 1 ಮತ್ತು ಪಿಡಬ್ಲ್ಯೂ 2 ಹಾಗೂ ಪಿಡಬ್ಲ್ಯೂ 3 ಸಾಕ್ಷಿದಾರರು ನೀಡಿದ ಹೇಳಿಕೆಗಳನ್ನು ಪರಿಶೀಲಿಸಿ ನೋಡಿದಾಗ ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ, ಅಲ್ಲದೇ ಸದರಿ ಮೇಲ್ಕಂಡ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡಿರುವುದು ಎಲ್ಲಾ ಅಧಿಕೃತ ದಾಖಲಾತಿಗಳನ್ನು ಸಾಕ್ಷಿರೂಪವಾಗಿ ಹಾಜರುಪಡಿಸಿ ಗುರುತಿಸಿಕೊಂಡು ಸಂಶಯರಹಿತವಾಗಿ ರುಜುವಾತುಪಡಿಸಿರುತ್ತಾರೆ. ಆದ್ದರಿಂದ ಅಂಶ-ಒಂದಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2**

ದಿನಾಂಕ 14.9.95 ರಂದು ವಾಹನದ ಮಾಲೀಕರಾದ ಶ್ರೀ ಸುರೇಶ್ ಬಾಬು ನಂ:5, 34ನೇ ಕ್ರಾಸ್, IIನೇ ಮುಖ್ಯರಸ್ತೆ, ಜೋಗನಹಳ್ಳಿ, IIನೇ ಸ್ಟೇಜ್, ರಾಜಾಜಿನಗರ, ಬೆಂಗಳೂರು-10 ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ದಿನಾಂಕ: 24.7.95 ರಂದು ನನ್ನ ವಾಹನ ಮೆಟಡೋರ್ ವ್ಯಾನ್ ಸಂಖ್ಯೆ: ಕೆಎ-03-1694 ನ್ನು ಮನೆಯ ಮುಂದೆ ನಿಲ್ಲಿಸಿದ್ದು, ಬೆಳಿಗ್ಗೆ ನೋಡಿದಾಗ ನನ್ನ ವಾಹನ ಮನೆಯ ಮುಂದೆ ಇರಲಿಲ್ಲ. ಆ ದಿನ ಹುಡುಕಾಡಿ ನಂತರ ಅದೇ ದಿವಸ ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಫಿರ್ಯಾದನ್ನು ನೀಡಿರುತ್ತೇನೆ. ಸದರಿ ಫಿರ್ಯಾದಿಯು ಕಲಂ 379 ರ ಭಾರತೀಯ ದಂಡ ಸಂಹಿತೆಯ ಪ್ರಕಾರ ಸಿಆರ್ ನಂ: 266/95 ರಲ್ಲಿ ಫಿರ್ಯಾದಿಯನ್ನು ಸ್ವೀಕರಿಸಿ ಕೇಸನ್ನು ದಾಖಲು ಮಾಡಿರುತ್ತಾರೆ. ರಾಜಾಜಿನಗರ ಪೊಲೀಸ್ ಠಾಣೆಯ ಆರಕ್ಷಕರು ಸದರಿ ಮೆಟಡೋರ್ ವಾಹನವನ್ನು ಹುಡುಕುವುದಾಗಿ ಭರವಸೆಯನ್ನು ಕೊಟ್ಟರು, ನಂತರ ಸದರಿ ವಾಹನವನ್ನು ಆರಕ್ಷಕ ಉಪ ನಿರೀಕ್ಷಕರು, ಲಿಂಗದಹಳ್ಳಿ ಪೊಲೀಸ್ ಠಾಣೆಯವರು ದಿನಾಂಕ 1.8.95ರ ರಾತ್ರಿ ಕಲ್ಲತ್ತಿಗಿರಿ ಕ್ರಾಸ್‌ನ ಹತ್ತಿರ ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದಾರೆಂದು, ಸದರಿ ವಾಹನವನ್ನು ಪೊಲೀಸರು ವಶಪಡಿಸಿಕೊಂಡು ಹಾಗೂ ಸದರಿ ವಾಹನದಲ್ಲಿದ್ದ ಮಂಜ, ರಾಜ ಮತ್ತಿತರರನ್ನು ದಸ್ತಗಿರಿ ಮಾಡಿ ಠಾಣೆಯ ಗುನ್ನೆ ನಂ: 52/95ರ ಅಡಿಯಲ್ಲಿ ಕಲಂ 379 ರ ಭಾರತೀಯ ದಂಡ ಸಂಹಿತೆ ಹಾಗೂ 24 ಸೆಕ್ಷನ್ ರ ಅರಣ್ಯ ಕಾಯ್ದೆಯಡಿಯಲ್ಲಿ ಕೇಸನ್ನು ದಾಖಲು ಮಾಡಿ ವಾಹನವನ್ನು ಹಾಗೂ ಮೇಲ್ಕಂಡ ವ್ಯಕ್ತಿಗಳನ್ನು ಬಂಧಿಸಿ ಲಿಂಗದಹಳ್ಳಿ ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡಿರುತ್ತಾರೆ. ಈ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ, ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಸದರಿ ಅರ್ಜಿದಾರರಿಗೆ ಈ ನ್ಯಾಯಾಲಯದಿಂದ ದಿನಾಂಕ: 6.10.95 ರಂದು ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ಹೊರಡಿಸಿ ಅರ್ಜಿದಾರರು ಸಮಜಾಯಿಸಿಯನ್ನು ನೀಡಲು ಸೂಚಿಸಿರುತ್ತದೆ. ಸದರಿ ಅರ್ಜಿದಾರರು ದಿನಾಂಕ:7.10.95ರ ಪತ್ರದಲ್ಲಿ ಈ ನ್ಯಾಯಾಲಯದ ಕಾರಣ ಕೇಳಿ ತಿಳುವಳಿಕೆ ಪತ್ರಕ್ಕೆ ಹೇಳಿಕೆ ನೀಡಿರುತ್ತಾರೆ. ಅವರ ಸಮಜಾಯಿಸಿ ಹೇಳಿಕೆ ಪ್ರಕಾರ ಸದರಿ ಅರ್ಜಿದಾರರು ಮೆಟಡೋರ್ ವ್ಯಾನ್ ನಂ: ಕೆಎ-03-1694 ರ ಮಾಲೀಕರೆಂದು ಸದರಿ ವಾಹನವನ್ನು ಅರ್ಜಿದಾರರ ಜೀವನೋಪಾಯಕ್ಕಾಗಿ ಬಾಡಿಗೆಗೆ ಓಡಿಸುತ್ತಿರುತ್ತಾರೆಂದೂ, ಸದರಿ ವಾಹನವನ್ನು ತಮ್ಮ ಮನೆಯ ಹತ್ತಿರ ದಿನಾಂಕ:24.7.95 ರಂದು ತಮ್ಮ ಮನೆಯ ಮುಂದೆ ನಿಲ್ಲಿಸಿದ್ದರೆಂದು, ಆದರೆ ದಿನಾಂಕ 25.7.95 ರಂದು ಬೆಳಿಗ್ಗೆ ಎದ್ದು ನೋಡಿದಾಗ ಸದರಿ ವಾಹನವು ಮನೆಯ ಹತ್ತಿರ ಇರಲಿಲ್ಲ. ಅರ್ಜಿದಾರರು ತಮ್ಮ ಮನೆಯ ಸುತ್ತಮುತ್ತ ಹುಡುಕಿ ಅದೇ ದಿನ ಕೊನೆಗೆ ರಾಜಾಜಿನಗರ ಪೊಲೀಸ್ ಠಾಣೆಯಲ್ಲಿ ಫಿರ್ಯಾದನ್ನು ನೀಡಿರುತ್ತಾರೆಂದು, ಪೊಲೀಸರು ಅವರ ಫಿರ್ಯಾದನು ಸ್ವೀಕರಿಸಿ ಕಲಂ 379 ರ ಭಾರತೀಯ ದಂಡ ಸಂಹಿತೆಯ ಪ್ರಕಾರ ಸಿಆರ್ ನಂ: 266/95 ರಲ್ಲಿ ಫಿರ್ಯಾದನ್ನು ಸ್ವೀಕರಿಸಿ ಕೇಸನ್ನು ದಾಖಲು ಮಾಡಿರುತ್ತಾರೆ. ತದ ನಂತರ, ಸದರಿ ರಾಜಾಜಿನಗರ ಪೊಲೀಸ್ ಠಾಣೆಯ ಆರಕ್ಷಕರು ಸದರಿ ಮೆಟಡೋರ್ ವಾಹನವನ್ನು ಹುಡುಕುವುದಾಗಿ ಭರವಸೆಯನ್ನು ಕೊಟ್ಟರು. ಸದರಿ ವಾಹನವನ್ನು ಆರಕ್ಷಕ ಉಪ ನಿರೀಕ್ಷಕರು, ಲಿಂಗದಹಳ್ಳಿ ಪೊಲೀಸ್ ಠಾಣೆಯವರು ದಿನಾಂಕ: 1.8.1995ರ ರಾತ್ರಿ ಕಲ್ಲತ್ತಿಗಿರಿ ಕ್ರಾಸ್‌ನ ಹತ್ತಿರ ಸಾಗುವಾನಿ ತುಂಡುಗಳನ್ನು ಅಕ್ರಮವಾಗಿ ಸಾಗಿಸುತ್ತಿದ್ದರೆಂದು ಸದರಿ ವಾಹನವನ್ನು ಪೊಲೀಸರು ವಶಪಡಿಸಿಕೊಂಡು ಹಾಗೂ ಸದರಿ ವಾಹನದಲ್ಲಿದ್ದ ಮಂಜ, ರಾಜ ಮತ್ತಿತರನ್ನು ದಸ್ತಗಿರಿ ಮಾಡಿ ಠಾಣೆಯ ಗುನ್ನೆ ನಂ: 92/95ರ ಅಡಿಯಲ್ಲಿ ಕಲಂ 379ರ ಭಾರತೀಯ ದಂಡ ಸಂಹಿತೆಯ ಹಾಗೂ 24 ಸೆಕ್ಷನ್ ರ ಅರಣ್ಯ ಕಾಯ್ದೆ ಅಡಿಯಲ್ಲಿ ಕೇಸನ್ನು

ದಾಖಲು ಮಾಡಿ ವಾಹನವನ್ನು ಹಾಗೂ ಮೇಲ್ಕಂಡ ವ್ಯಕ್ತಿಗಳನ್ನು ಬಂಧಿಸಿ ಸದರಿ ಲಿಂಗದಹಳ್ಳಿ ಪೊಲೀಸರು ತಮ್ಮ ವಶಕ್ಕೆ ತೆಗೆದುಕೊಂಡಿರುತ್ತಾರೆ. ಮೇಲ್ಕಂಡ ಕೃತ್ಯಕ್ಕೂ ನನಗೂ ಯಾವುದೇ ಸಂಬಂಧವಿಲ್ಲ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳು ಸಾಗಾಣಿಕೆ ಆದ ಬಗ್ಗೆ ಯಾವುದೇ ತಿಳುವಳಿಕೆ ಇರುವುದಿಲ್ಲವೆಂದು, ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಂಡಲ್ಲಿ ತುಂಬಲಾರದ ನಷ್ಟ ಹಾಗೂ ಅವರ ಜೀವನೋಪಾಯಕ್ಕೆ ತೊಂದರೆಯಾಗುವುದಾಗಿ ಸದರಿ ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಈ ನ್ಯಾಯಾಲಯದಲ್ಲಿ ದಿನಾಂಕ 30.12.95 ರಂದು ವಿಚಾರಣೆ ನಡೆಸಿರುತ್ತದೆ. ಸದರಿ ದಿನಾಂಕದಂದು ಸರ್ಕಾರಿ ಅಭಿಯೋಜಕರವರು ಮಧ್ಯಂತರ ಅರ್ಜಿಯ ಬಗ್ಗೆ ವಾದ ವಿವಾದವನ್ನು ಮಂಡಿಸಿದ್ದು ಅದನ್ನು ಆಲಿಸಿರುತ್ತದೆ. ಅರ್ಜಿದಾರರು ಮೇಲ್ಕಂಡ ಮೊಕದ್ದಮೆಯಲ್ಲಿ ಭಾಗಿಯಾಗಿಲ್ಲವೆಂದು ಅವರ ಜೀವನ ನಿರ್ವಹಣೆಗೆ ಮೇಲ್ಕಂಡ ವಾಹನದ ಅವಶ್ಯಕತೆ ಇರುತ್ತದೆಂದು, ಸದರಿ ವಾಹನವು ಅರಣ್ಯ ಮೊಕದ್ದಮೆಯಲ್ಲಿ ಸಿಕ್ಕಿರುವುದು ಕಂಡುಬಂದಿರುತ್ತದೆಂದು ಈ ಕೃತ್ಯಕ್ಕೂ ಅರ್ಜಿದಾರರಿಗೂ ಯಾವುದೇ ಸಂಬಂಧವಿಲ್ಲವೆಂದು ಈ ಕಾರಣಗಳಿಂದ ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಅರ್ಜಿದಾರರ ಪರ ವಕೀಲರು ವಾದ ಮಂಡಿಸಿರುತ್ತಾರೆ. ಇದಕ್ಕೆ ಪ್ರತಿಯಾಗಿ ಅಭಿಯೋಜನೆವತಿಯಿಂದ ಈ ಮೊಕದ್ದಮೆಯಲ್ಲಿ ಅರ್ಜಿದಾರರು ಶಾಮೀಲಾಗಿರುವುದು ಕಂಡುಬರುತ್ತದೆಂದು ಆರೋಪಿಗಳನ್ನು ಬಂಧಿಸಿ ಪೊಲೀಸಿನವರು ಮೊಕದ್ದಮೆ ದಾಖಲು ಮಾಡಿರುವುದಾಗಿ, ವಾಹನವನ್ನು ಬಿಡುಗಡೆ ಮಾಡಿದ್ದೇ ಆದಲ್ಲಿ ಪುನಃ ಇದೇ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆ ಇರುತ್ತದೆಂದು, ವಾಹನ ಮಾಲೀಕರು ಮೋಟಾರು ವಾಹನ ಕಾಯ್ದೆಯನ್ವಯ ವಾಹನವನ್ನು ದಿನನಿತ್ಯ ಬಾಡಿಗೆಗೆ ಕಳುಹಿಸುವ ಬಗ್ಗೆ ಚಾಲನೆ ವಹಿ ಇಡಬೇಕಾಗಿದ್ದು, ಅವರು ಅದನ್ನು ಇಟ್ಟಿಲ್ಲವೆಂದು ಪ್ರತಿವಾದ ಮಂಡಿಸಿರುತ್ತಾರೆ. ಮೇಲ್ಕಂಡ ಎಲ್ಲಾ ವಿಷಯಗಳನ್ನು ಅವಲೋಕಿಸಿ ನೋಡಲಾಗಿ ಅರ್ಜಿದಾರರು ಮೇಲ್ಕಂಡ ವಾಹನವನ್ನು ಬೀಟೆ ಮತ್ತು ಸಾಗುವಾನಿ ತುಂಡುಗಳ ಅಕ್ರಮ ಸಾಗಾಣಿಕೆಗೆ ತೊಡಗಿಸುವಲ್ಲಿ ಯಾವುದೇ ಮುಂಜಾಗ್ರತೆ ಕ್ರಮ ಕೈಗೊಂಡಿರುವುದಿಲ್ಲ ಹಾಗೂ ವಾಹನವನ್ನು ಅಕ್ರಮ ಸಾಗಾಣಿಕೆಯಲ್ಲಿ ತೊಡಗಿಸಿಲ್ಲ ಎಂದು ಪುರಾವೆ ಒದಗಿಸುವಲ್ಲಿ ವಿಫಲರಾಗಿರುತ್ತಾರೆ. ಅರ್ಜಿದಾರರು ಸದರಿ ವಾಹನವನ್ನು ಬಾಡಿಗೆಗೆ ಯಾರಿಗೆ ಕೊಟ್ಟಿರುತ್ತಾರೆ ಎಂಬುದನ್ನು ನಿರೂಪಿಸಿರುವುದಿಲ್ಲ. ಅರ್ಜಿದಾರರ ವಾಹನ ಮನೆಯ ಮುಂದೆ ನಿಲ್ಲಿಸಿದ್ದು, ಕಾಣೆಯಾಗಿರುತ್ತದೆ ಎಂಬುದಾಗಿ ಅರ್ಜಿದಾರರ ವಕೀಲರು ವಾದ ಮಂಡಿಸಿದ್ದು, ಅರ್ಜಿದಾರರು ಆರೋಪಿಗಳ ಜೊತೆ ಸೇರಿ ಕಳ್ಳ ಸಾಗಾಣಿಕೆಯಲ್ಲಿ ಮೇಲ್ಕಂಡ ವಾಹನವನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ ಹಾಗೂ ಸದರಿ ಪ್ರಕರಣದಲ್ಲಿ ಪೂರ್ಣ ವಿಚಾರಣೆ ಅವಶ್ಯವಿರುತ್ತದೆ. ಆದುದರಿಂದ ಮೆಟಡೋರ್ ವ್ಯಾನ್ ಸಂಖ್ಯೆ:ಕೆಎ-03-1694 ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಕೋರಿರುವ ಮಧ್ಯಂತರ ಅರ್ಜಿಯನ್ನು ಮೇಲ್ಕಂಡ ಕಾರಣಗಳಿಂದ ದಿನಾಂಕ 30.12.95 ರಂದು ತಿರಸ್ಕರಿಸಲಾಗಿದೆ.

ವಾಹನದ ಮಾಲೀಕರು ಈ ನ್ಯಾಯಾಲಯದ ಆದೇಶದ ವಿರುದ್ಧ ಶಿವಮೊಗ್ಗ ಸೆಷನ್ಸ್ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ಈ ನ್ಯಾಯಾಲಯದ ಆದೇಶವನ್ನು ಬದಿಗೊತ್ತಿ ವಾಹನವನ್ನು ರೂ.2.00 ಲಕ್ಷ ಬ್ಯಾಂಕ್ ಗ್ಯಾರಂಟಿ ಹಾಗೂ ಒಬ್ಬರು ಸಾಲ್ವೆಂಟ್ ಶ್ಯೂರಿಟಿ ಪಡೆದು ಬಿಡುಗಡೆ ಮಾಡಲು ಕ್ರಿಮಿನಲ್ ಮಿಸ್ ಅಪೀಲ್ ನಂ:1/96 ದಿನಾಂಕ 20.1.96 ರಂದು ಆದೇಶಿಸಿರುತ್ತದೆ. ವಾಹನದ ಮಾಲೀಕರು ಶಿವಮೊಗ್ಗ ಸೆಷನ್ಸ್ ನ್ಯಾಯಾಲಯದ ಆದೇಶದಂತೆ ಇಂಡೆಮ್ನಿಟಿ ಬಾಂಡನ್ನು ಷರತ್ತುಗಳ ಮೂಲಕ ಈ ನ್ಯಾಯಾಲಯಕ್ಕೆ ಹಾಜರುಪಡಿಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಈ ಪ್ರಕರಣದಲ್ಲಿ ವಾಹನದ ಮಾಲೀಕರಿಗೆ ಈ ನ್ಯಾಯಾಲಯಕ್ಕೆ ವಿಚಾರಣೆಗೆ ಹಾಜರಾಗಲು, 4.5.96, 15.6.96, 17.8.96, 21.11.98, 31.5.2000, 19.7.2000, 6.12.2000, 1.01.2001, 20.6.2001, 29.8.2001, 24.10.2001, 19.12.2001, 6.2.2002, 3.4.2002, 3.7.2002, 16.10.2002, 4.12.2002, 9.4.2003, 28.5.2003, 16.7.2003, 22.10.2003, 17.12.2003, 4.2.2004, 7.4.2004 ರಂದು ನೋಟೀಸ್ ನೀಡಿರುತ್ತದೆ. ವಾಹನದ ಮಾಲೀಕರು ಸರಿಯಾಗಿ ವಿಚಾರಣೆಗೆ ಹಾಜರಾಗದೇ ಗೈರುಹಾಜರಾಗಿರುತ್ತಾರೆ. ವಾಹನ ಮಾಲೀಕರ ಪರ ಅವರ ವಕೀಲರು ನ್ಯಾಯಾಲಯಕ್ಕೆ ಹಾಜರಾಗಿದ್ದು ಯಾವುದೇ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ವಾಹನದ ಮಾಲೀಕರು ತಪ್ಪಿತಸ್ಥರಲ್ಲ ಮತ್ತು ವಾಹನದಲ್ಲಿ ಅಕ್ರಮ ಸಾಗಾಣಿಕೆಯು ಆಗಿರುವುದಿಲ್ಲ ಎಂಬ ಬಗ್ಗೆ ನಿರೂಪಿಸಿರುವುದಿಲ್ಲ. ಅಲ್ಲದೇ ನ್ಯಾಯಾಲಯದಲ್ಲಿ ಪದೇ ಪದೇ ಸಮಯಾವಕಾಶವನ್ನು ಕೋರಿರುತ್ತಾರೆ. ಈ ರೀತಿ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನವನ್ನು ಹಸಿ ಸಾಗುವಾನಿ ತುಂಡುಗಳನ್ನು ರಹದಾರಿಯಿಲ್ಲದೇ ಕಳ್ಳಸಾಗಾಣಿಕೆಗೆ ಬಳಸಿದಾಗ ಅದು ತಮ್ಮ ಗಮನಕ್ಕೆ ಬಾರದಂತೆ ಕೃತ್ಯ ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಾಧಾರಗಳನ್ನು ವಾಹನದ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಅರಣ್ಯ ಉತ್ಪನ್ನವಾದ ಸಾಗುವಾನಿ ಮತ್ತು ಬೀಟೆ ತುಂಡುಗಳನ್ನು ಸಾಗಾಣಿಕೆಗೆ ಬಳಕೆಯಾಗದಂತೆ ವಾಹನದ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರ ನೀಡಿರುವುದಿಲ್ಲ ವಾಹನಗಳಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71-ಬಿ(2) ರ ರೀತ್ಯ ಸಾಬೀತುಪಡಿಸುವ ಜವಾಬ್ದಾರಿ ವಾಹನ ಮಾಲೀಕರಿಗೆ ಸೇರಿದ್ದಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool, rope, chain, boat, vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool, rope, chain, boat, vehicle or cattle and that each of them had taken all reasonable and necessary precautions against such use."

ಅಲ್ಲದೇ ವಾಹನದ ಮಾಲೀಕರ ಏಜೆಂಟರಾಗಲೀ, ಚಾಲಕನಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನಗಳಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹ ಇವರುಗಳ ಜವಾಬ್ದಾರಿಯಾಗಿರುತ್ತದೆ. ಆಟೋರಿಕ್ಷಾ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಕಾನೂನು ಬಾಹಿರವಾಗಿ ಸಾಗಿಸದಂತೆ, ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿದ್ದೇವೆ ಎಂಬುದನ್ನು ಸಾಕ್ಷಿ ಹಾಗೂ ಪುರಾವೆಗಳ ಸಹಿತ ಈ ಪ್ರಾಧಿಕಾರದಲ್ಲಿ ಸಾಬೀತುಪಡಿಸಲು ವಾಹನದ ಮಾಲೀಕರು ಹಾಗೂ ಅವರ ಪರ ವಕೀಲರು ಸಂಪೂರ್ಣ ವಿಫಲಗೊಂಡಿರುತ್ತಾರಾದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಹಾಲಿ ಈ ಪ್ರಕರಣಕ್ಕೆ ಕೇರಳ ರಾಜ್ಯದ ತೀರ್ಮಾನ ಕ್ರೈಮ್ಸ್ 2000 (3) ಪುಟ 563 ಅತ್ಯಂತ ಸರಿಹೊಂದುವಂತಹ ತೀರ್ಮಾನವಾಗಿರುತ್ತದೆ. ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow of liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory

and explicit message to the vehicle owners not to allow their vehicles to be used for depletion of forest wealth. If any vehicle is cought in the nafarious act of carrying illicit forest produce, it is not enough that the owner establishes his innocence alone. If he wants to retrieve his vehicle he must show further that the person who was in-charge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity."

ಈ ಪ್ರಕರಣದಲ್ಲಿ ಅರ್ಜಿದಾರರು / ವಾಹನದ ಮಾಲೀಕರು ನ್ಯಾಯಾಲಯಕ್ಕೆ ಹಾಜರಾಗಲು ಸೂಚಿಸಿದ್ದರೂ ಸಹ ಹಾಜರಾಗದೆ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿರುತ್ತಾರೆ. ಅವರ ಪರ ವಾದ ಮಂಡಿಸಲು ನೇಮಿಸಿದ ವಕೀಲರು ಸಹ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಆದ್ದರಿಂದ ಮೇಲೆ ಹೇಳಲಾದ ವಾಹನವನ್ನು ವಾಹನದ ಮಾಲೀಕರೇ ನೇರವಾಗಿ ಅರಣ್ಯ ಉತ್ಪನ್ನ ಅಕ್ರಮ ಕಳ್ಳ ಸಾಗಾಣಿಕೆಗೆ ಬಳಸಿರುವುದು ಈ ಪ್ರಕರಣದ ವಿಚಾರಣೆಯಿಂದ ಹಾಗೂ ದಾಖಲಾತಿಗಳ ಪರಿಶೀಲನೆಯಿಂದ ದೃಢಪಟ್ಟಿರುತ್ತದೆ. ಆದ್ದರಿಂದ ಅಂಶ-2ನ್ನು ಇಲ್ಲ ಎಂದು ಪರಿಗಣಿಸಲಾಯಿತು.

**ಅಂತಿಮ ಆದೇಶ**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯ್ದೆ 1963 ಸೆಕ್ಷನ್ 71-ಎ (2)ನೇ ತಿದ್ದುಪಡಿ ಪ್ರಕಾರ ಮೆಟಡೋರ್ ವ್ಯಾನ್ ಕೆಎ-03-1694 (ಇಂಜಿನ್ ನಂ: 616969056822 ಛಾಸೀಸ್ ನಂ: 616 ಎಫ್‌ಡಿ 716724) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದ ಆರು ಸಾಗುವಾನಿ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತದೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೆಲ್ಕಂಡ ಅವಧಿ ಮೀರಿದ ಬಳಿಕ ವಾಹನಗಳು ಹಾಗೂ ಆರು ಸಾಗುವಾನಿ ತುಂಡುಗಳನ್ನು ಕಾನೂನು ರೀತ್ಯಾ ವಿಲೇಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 8.9.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಅನುಬಂಧ**

ಫಿರ್ಯಾದಿದಾರರ ಸಾಕ್ಷಿಗಳ ವಿಚಾರಣೆ

(1) ಪಿ.ಡಬ್ಲ್ಯು 1 ಡಿ.ಎಸ್. ಪಾಪಣ್ಣ, ಬಿನ್ ಸಣ್ಣಹನುಮಯ್ಯ, ಪಿ.ಎಸ್.ಐ.

(2) ಪಿ.ಡಬ್ಲ್ಯೂ 2 ಜಿ.ಎಂ. ಖಾಸಿಮ್ ಲೇಟ್ ಮಹಮದ್ ಮೊಹಿದ್ದಿನ್, ಪಿ.ಎಸ್.ಐ.

(3) ಪಿ.ಡಬ್ಲ್ಯೂ 3 ಎಂ.ಹೆಚ್. ಜಯಕುಮಾರ್ ಬಿನ್ ಪಾರ್ಥಸಾರಥಿ, ವೃತ್ತ ನಿರೀಕ್ಷಕರು

ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ

(1) ಪಿ1 ಪ್ರಥಮ ಮಾಹಿತಿ ವರದಿ

(2) ಪಿ1ಎ ಪಿಡಬ್ಲ್ಯೂ 1 ಸಾಕ್ಷಿದಾರರ ಸಹಿ

(3) ಪಿ2 ಸ್ಥಳ ಮಹಜರ್

(4) ಪಿ2ಎ ಪಿಡಬ್ಲ್ಯೂ 2 ಸಾಕ್ಷಿದಾರರ ಸಹಿ

(5) ಪಿ2ಬಿ ಪಿಡಬ್ಲ್ಯೂ 3 ಸಾಕ್ಷಿದಾರರ ಸಹಿ

(6) ಪಿ3 ಅಮಾನತ್ತು ಮಹಜರ್

(7) ಪಿ3ಎ ಪಿಡಬ್ಲ್ಯೂ 2 ಸಾಕ್ಷಿದಾರರ ಸಹಿ

**ಎಕ್ಸಿಬಿಟ್-1**

ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ ದಿ:14.9.95

**ಎಕ್ಸಿಬಿಟ್-2**

ಮಧ್ಯಂತರ ಅರ್ಜಿಯ ಬಗ್ಗೆ ಆದೇಶ ದಿನಾಂಕ: 20.1.96

**ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ**

ಯಾವುದೂ ಇರುವುದಿಲ್ಲ.

**ಸೀಮಾ ಗರ್ಗ್**

ಪಿ.ಆರ್. 1559 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ-ಸಿಓಎನ್-ಸಿಆರ್-1/96-97, ದಿನಾಂಕ: 22ನೇ ಸೆಪ್ಟೆಂಬರ್ 2004**

| | | |
|---|---|---|
| **ನಿರೂಪಣಾಧಿಕಾರಿಗಳು** | : | ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ.,<br>ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,<br>ಭದ್ರಾವತಿ ವಿಭಾಗ, ಭದ್ರಾವತಿ. |
| **ಫಿರ್ಯಾದುದಾರರು** | : | ವಲಯ ಅರಣ್ಯಾಧಿಕಾರಿ,<br>ತರೀಕೆರೆ ವಲಯ, ತರೀಕೆರೆ. |
| **ಅರ್ಜಿದಾರರು** | : | ಎಸ್.ಬಿ. ರಾಮಚಂದ್ರಪ್ಪ ಬಿನ್ ಭೈರಪ್ಪ,<br>ಸಾರಕ್ಕಿ ಗ್ರಾಮ, ಜೆ.ಪಿ. ನಗರ, ಬೆಂಗಳೂರು |

**ಪ್ರಕರಣದ ಹಿನ್ನೆಲೆ:**

ದಿನಾಂಕ: 14.4.96 ರಂದು ವಲಯ ಅರಣ್ಯಾಧಿಕಾರಿ, ತರೀಕೆರೆ ಮತ್ತು ಅವರ ಸಿಬ್ಬಂದಿಯವರು ಬೀಟೆ ಮತ್ತು ಸಾಗುವಾನಿ ಸೈಜುಗಳ ಅಕ್ರಮ ಸಾಗಾಣಿಕೆ ಸಂಬಂಧ ಬಜಾಜ್ ಟೆಂಪೋ ಕೆಎ-05-9989 ನ್ನು ತರೀಕೆರೆ-ಲಿಂಗದಹಳ್ಳಿ ರಸ್ತೆ ಗಾಳಿಹಳ್ಳಿ ಕ್ರಾಸ್ ಸಮೀಪ ಪತ್ತೆ ಹಚ್ಚಿ ಅದರಲ್ಲಿದ್ದ 24 ಬೀಟೆ ಮತ್ತು 6 ಸಾಗುವಾನಿ ತುಂಡುಗಳನ್ನು ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ದಾಖಲು ಮಾಡಿ ಸದರಿ ವಾಹನ ಹಾಗೂ ಬೀಟೆ ಮತ್ತು ಸಾಗುವಾನಿ ತುಂಡುಗಳನ್ನು ಅರಣ್ಯ ಕಾಯ್ದೆ 71(ಎ) ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯಕ್ಕೆ ಮುಂದಿನ ಕ್ರಮಕ್ಕಾಗಿ ಒಪ್ಪಿಸಿರುತ್ತದೆ.

ಈ ಮೊಕದ್ದಮೆಗೆ ಸಂಬಂಧಿಸಿದ ವಾಹನವನ್ನು ಹಾಗೂ ಸರ್ಕಾರದ ಪರ ವಶಪಡಿಸಿಕೊಂಡ ಬೀಟೆ ಮತ್ತು ಸಾಗುವಾನಿ ತುಂಡುಗಳನ್ನು ವಲಯ ಅರಣ್ಯ ಅಧಿಕಾರಿ, ತರೀಕೆರೆ ವಲಯ, ತರೀಕೆರೆ ಇವರಿಗೆ ದಿನಾಂಕ 20.4.96 ರಂದು ಸುರಕ್ಷತೆಗಾಗಿ ವಹಿಸಿಕೊಟ್ಟಿರುತ್ತದೆ.

ಈ ಸಂಬಂಧದಲ್ಲಿ ಅರ್ಜಿದಾರ ಶ್ರೀ ಎಸ್.ಬಿ. ರಾಮಚಂದ್ರಪ್ಪ ಬಿನ್ ಭೈರಪ್ಪ, ಬೆಂಗಳೂರು ಇವರು ದಿನಾಂಕ 3.5.96 ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ಸದರಿ ಅರ್ಜಿದಾರರು ಮೇಲ್ಕಂಡ ವಾಹನದ ಮಾಲೀಕರೆಂದು ಅವರ ಜೀವನೋಪಾಯಕ್ಕೆ ಮೇಲ್ಕಂಡ ವಾಹನವನ್ನು ಅವಲಂಬಿಸಿರುತ್ತಾರೆಂದು, ಸದರಿ ವಾಹನವನ್ನು ಕೆ.ಎಸ್.ಎಫ್.ಸಿ. ಬೆಂಗಳೂರು ಇವರಿಗೆ ಅಡಮಾನ ಮಾಡಿರುವುದಾಗಿ ಸದರಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಈ ಸಂಬಂಧ ಸದರಿ ಅರ್ಜಿದಾರರಿಗೆ ದಿನಾಂಕ 9.5.96 ರಂದು ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿ, ಸದರಿ ವಾಹನವನ್ನು ಅಕ್ರಮ ಮರಗಳ ಸಾಗಾಣಿಕೆಗೆ ಉಪಯೋಗಿಸಿರುವುದರಿಂದ ಅರಣ್ಯ ಕಾಯ್ದೆ ಪ್ರಕಾರ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅವರ ಸಮಜಾಯಿಸಿ ನೀಡಲು ತಿಳಿಸಿರುತ್ತದೆ. ಸದರಿ ಅರ್ಜಿದಾರರು ದಿನಾಂಕ: 15.5.96 ರಲ್ಲಿ ಈ ನ್ಯಾಯಾಲಯದ ಕಾರಣ ಕೇಳಿ ತಿಳುವಳಿಕೆ ಪತ್ರಕ್ಕೆ ಸಮಜಾಯಿಸಿ ನೀಡಿರುತ್ತಾರೆ ಹಾಗೂ ಅವರ ಸಮಜಾಯಿಸಿ ಒಪ್ಪುವಂತದ್ದಾಗಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು, ಜೆ ಎಂ ಎಫ್ ಸಿ ನ್ಯಾಯಾಲಯ, ಭದ್ರಾವತಿ ಇವರು ದಿನಾಂಕ: 17.6.96 ರಂದು ಸದರಿ ಪ್ರಕರಣದಲ್ಲಿ ಆಕ್ಷೇಪಣೆ ವರದಿಯನ್ನು ಸಲ್ಲಿಸಿರುತ್ತಾರೆ. ಅವರ ವರದಿ ಪ್ರಕಾರ ವಲಯ ಅರಣ್ಯಾಧಿಕಾರಿ, ತರೀಕೆರೆ ಇವರು ಮೇಲ್ಕಂಡ ವಾಹನವನ್ನು ದಿನಾಂಕ 14.4.96 ರಂದು ತಪಾಸಣೆ ಮಾಡಿ, ಸದರಿ ಟೆಂಪೋದಲ್ಲಿ ಬೀಟೆ/ಸಾಗುವಾನಿ ತುಂಡುಗಳು ಅಕ್ರಮದಾಗಿದ್ದು ಕಂಡು ಬಂದು ಅಮಾನತ್ತುಪಡಿಸಿಕೊಂಡಿರುವುದಾಗಿ, ಈ ಪ್ರಕರಣದಲ್ಲಿ 1ನೇ ಆರೋಪಿಯೇ ವಾಹನ ಮಾಲೀಕನಾಗಿದ್ದು, ಈತನು ಉದ್ದೇಶಪೂರ್ವಕವಾಗಿ ಪರವಾನಗಿ ಇಲ್ಲದೇ 30 ಬೀಟೆ/ಸಾಗುವಾನಿ ತುಂಡುಗಳನ್ನು ಅನಧಿಕೃತವಾಗಿ ಸಾಗಿಸುತ್ತಿರುವುದು ಮೇಲ್ನೋಟಕ್ಕೆ ಪುರಾವೆಯಾಗಿರುವ ಕಾರಣ ಅಮಾನತ್ತುಪಡಿಸಿಕೊಂಡ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬೇಕಾಗಿರುತ್ತದೆಂದು, ಅರ್ಜಿದಾರ/ವಾಹನ ಮಾಲೀಕರನ್ನು ಮಾಲು ಸಹಿತ ಸದರಿ ಪ್ರಕರಣದಲ್ಲಿ ಬಂಧಿಸಿರುವುದರಿಂದ ಮೇಲ್ನೋಟಕ್ಕೆ ವಾಹನವನ್ನು ಉದ್ದೇಶಪೂರ್ವಕವಾಗಿ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಗೆ ತೊಡಗಿರುವುದು ಕಂಡು ಬಂದಿರುತ್ತದೆಂದು, ಈ ಹಂತದಲ್ಲಿ ಅರ್ಜಿದಾರರಿಗೆ ಬಿಡುಗಡೆ ಮಾಡಿದಲ್ಲಿ ಪುನಃ ಇದೇ ರೀತಿ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆ ಇರುತ್ತದೆಂದು, ಈ ಕಾರಣಗಳಿಂದ ಅರ್ಜಿದಾರರು ಸಲ್ಲಿಸಿರುವ ಮಧ್ಯಂತರ ಅರ್ಜಿಯನ್ನು ತಿರಸ್ಕರಿಸಲು ಅಭಿಯೋಜನೆವತಿಯಿಂದ ಕೇಳಿಕೊಂಡಿರುತ್ತಾರೆ.

ಸದರಿ ಅರ್ಜಿಯ ವಿಚಾರಣೆ ಸಂಬಂಧ ಈ ನ್ಯಾಯಾಲಯದಲ್ಲಿ ದಿನಾಂಕ 15.6.96 ಮತ್ತು 17.8.96 ರಂದು ದಿನಾಂಕ ಗೊತ್ತುಪಡಿಸಿ ವಿಚಾರಣೆ ನಡೆಸಿರುತ್ತದೆ. ಅರ್ಜಿದಾರರ ಮಧ್ಯಂತರ ಅರ್ಜಿಯ ಬಗ್ಗೆ ಎರಡು ಕಡೆಗಳಿಂದ ವಾದವನ್ನು ವಿಚಾರಣೆ ಮಾಡಲಾಯಿತು. ಸದರಿ ಅರ್ಜಿಯ ವಿಚಾರಣೆ ನಡೆಸಿದಾಗ ಬೀಟೆ/ಸಾಗುವಾನಿ ಅರಣ್ಯ ಉತ್ಪನ್ನದ ಅಕ್ರಮ ಸಾಗಾಣಿಕೆಯನ್ನು ತಡೆಗಟ್ಟಲು ಅರ್ಜಿದಾರ/ವಾಹನ ಮಾಲೀಕರೆನ್ನುವವರು ಯಾವುದೇ ಮುಂಜಾಗ್ರತೆ ಕ್ರಮ ಕೈಗೊಂಡಿರುವುದಿಲ್ಲ. ಈ ಪ್ರಕರಣದಲ್ಲಿ ಅರ್ಜಿದಾರ/ವಾಹನ ಮಾಲೀಕರೇ ಮೊದಲನೇ ಆರೋಪಿಯಾಗಿರುತ್ತಾರೆ. ಇವರು ಉದ್ದೇಶಪೂರ್ವಕವಾಗಿ ಪರವಾನಗಿ ಇಲ್ಲದೇ 30 ಬೀಟೆ / ಸಾಗುವಾನಿ ತುಂಡುಗಳನ್ನು ಅನಧಿಕೃತವಾಗಿ ಸಾಗಣೆ ಮಾಡಿರುವುದು ಮೇಲ್ನೋಟಕ್ಕೆ ಪುರಾವೆಯಾಗಿರುತ್ತದೆ. ಅರ್ಜಿದಾರರು ಸದರಿ ವಾಹನವನ್ನು ಬೀಟೆ/ ಸಾಗುವಾನಿ ತುಂಡುಗಳನ್ನು ಸಾಗಿಸಲು ಉಪಯೋಗಿಸದೇ ಇರುವುದಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿರುವುದಿಲ್ಲ. ಇದಲ್ಲದೇ ಈ ಪ್ರಕರಣದಲ್ಲಿ ವಾಹನ ಮಾಲೀಕರನ್ನು ಮಾಲು ಸಹಿತ ಬಂಧಿಸಿರುವುದರಿಂದ ಉದ್ದೇಶಪೂರ್ವಕವಾಗಿ ಅರಣ್ಯ ಉತ್ಪನ್ನಗಳ ಕಳ್ಳಸಾಗಾಣಿಕೆಯಲ್ಲಿ ವಾಹನವನ್ನು ತೊಡಗಿಸಿರುವುದು ಕಂಡುಬಂದಿರುತ್ತದೆ. ಆದುದರಿಂದ ಅರ್ಜಿದಾರರು ಮೇಲ್ಕಂಡ ವಾಹನ ಬಜಾಜ್ ಟೆಂಪೋ ಕೆಎ-05-9989 ನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆಗೆ ಕೋರಿರುವ ಮಧ್ಯಂತರ ಅರ್ಜಿಯನ್ನು ದಿನಾಂಕ 31.8.1996 ರಂದು ತಿರಸ್ಕರಿಸಲಾಗಿದೆ. ಅರ್ಜಿದಾರರು ಈ ನ್ಯಾಯಾಲಯದ ಆದೇಶದ ವಿರುದ್ಧ ಕ್ರಿಮಿನಲ್ ಮಿಸ್ ಅಪೀಲ್ ನಂ: 50/96 ರಲ್ಲಿ ಶಿವಮೊಗ್ಗ ಸೆಷನ್ಸ್ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿರುತ್ತಾರೆ. ಮಾನ್ಯ ನ್ಯಾಯಾಲಯವು ರೂ.2.00 ಲಕ್ಷಕ್ಕೆ ಒಬ್ಬ ಜಾಮೀನ್ದಾರ ರೂ.75,000-00ಕ್ಕೆ ಬ್ಯಾಂಕ್ ಗ್ಯಾರಂಟಿ ಹಾಗೂ ಇತರೇ ಷರತ್ತುಗಳ ಬಗ್ಗೆ ಇಂಡೆಮ್ನಿಟಿ ಬಾಂಡನ್ನು ಪಡೆದು, ವಾಹನವನ್ನು ತಾತ್ಕಾಲಿಕ ವಶಕ್ಕೆ ಬಿಡುಗಡೆ ಮಾಡಲು ದಿನಾಂಕ 5.12.96 ರಂದು ಆದೇಶಿಸಿರುತ್ತದೆ. ವಾಹನದ ಮಾಲೀಕರು ನ್ಯಾಯಾಲಯವು ವಿಧಿಸಿರುವ ಷರತ್ತುಗಳನ್ನು ಪೂರೈಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ 4.7.98 ರಿಂದ 11.8.2004 ರವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನದ ಮಾಲೀಕರ ಪರ ಸಾಕ್ಷಿಗಳನ್ನು ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ರವರ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮ ವಿಚಾರಣೆ ನಡೆಸಲಾಯಿತು. ಪ್ರಾಸಿಕ್ಯೂಷನ್ ಪರವಾಗಿ ಶ್ರೀ ಎಸ್.ಓ. ದಿನೇಶ್, ವನಪಾಲಕ, ದಿನಾಂಕ 16.8.2000 ರಂದು ಪ್ರಾ.ಸಾ.1 ಎಂದು ದಿ: 7.11.2001 ರಂದು ಶ್ರೀ ವೈ.ಕೆ. ಶ್ರೀಧರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾ.ಸಾ. 2 ಎಂದು ವಿಚಾರಣೆ ಮಾಡಿ ಹೇಳಿಕೆ ಪಡೆಯಲಾಯಿತು. ಪ್ರತಿವಾದಿಯ ಪರವಾಗಿ ದಿನಾಂಕ: 20.2.2002 ರಂದು ಶ್ರೀ ರಾಮಚಂದ್ರಪ್ಪ, ಬಿನ್ ಭೈರಪ್ಪ, ಬೆಂಗಳೂರು ಇವರನ್ನು ಅರ್ಜಿದಾರರ ಸಾಕ್ಷಿ 1 ಎಂದು ವಿಚಾರಣೆ ಮಾಡಿ ಹೇಳಿಕೆ ದಾಖಲಿಸಿಕೊಳ್ಳಲಾಯಿತು.

ಪ್ರಾಧಿಕಾರಕ್ಕೆ ಹಾಜರುಪಡಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಯಿತು ಹಾಗೂ ಅರ್ಜಿದಾರರುಗಳ ಪರವಾಗಿ ನ್ಯಾಯವಾದಿಗಳು ಮಂಡಿಸಿದ ವಾದ ವಿವಾದವನ್ನು ಆಲಿಸಲಾಯಿತು.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನಿನ ವಸ್ತುಸ್ಥಿತಿ ಹಾಗೂ ಲಭ್ಯವಿದ್ದ ವಿಷಯ ಸಾಮಗ್ರಿಗಳ ತಳಹದಿಯ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1) ಅರ್ಜಿದಾರ ಬಜಾಜ್ ಟೆಂಪೋ ಕೆಎ-05-9989 ರಲ್ಲಿ ಸಾಗುವಾನಿ ತುಂಡುಗಳು 6 ಬೀಟೆ ತುಂಡು 24ನ್ನು ದಿನಾಂಕ 14.4.96 ರಂದು ಕಾನೂನಿಗೆ ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೆ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯಿದೆ ಮತ್ತು ನಿಯಮ ಉಲ್ಲಂಘಿಸಲಾಗಿದೆಯೇ

2) ಕರ್ನಾಟಕ ಅರಣ್ಯ ವಿಧಿ 71(ಬಿ) (1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿ ನೋಟೀಸ್ ನೀಡಲಾಗಿದೆಯೇ ಹಾಗೂ ಮಾಲೀಕರವರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3) ವಾಹನ ಮಾಲೀಕರು ಅಥವಾ ಕೆಲಸಗಾರರು ಅಥವಾ ಅವರ ಪ್ರತಿನಿಧಿಗಳು ಲಾರಿಯಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ವಾಹನ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ಲಾರಿಯನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆಗೆ ಉಪಯೋಗಿಸದಂತೆ ವಾಹನದ ಮಾಲೀಕರು ಅದರ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸಾಕಷ್ಟು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4) ಈ ಪ್ರಕರಣದಲ್ಲಿ ಫಿರ್ಯಾದುದಾರರು ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಕಾಯಿದೆಯಂತೆ ಸರ್ಕಾರದ ಸ್ವತ್ತೆಂದು ಅಭಿಯೋಗವು ರುಜುವಾತುಪಡಿಸಿದೆಯೇ?

5) ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

6) ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1) ಒಂದನೇ ಅಂಶಕ್ಕೆ ಹೌದು ಎಂತಲೂ

2) ಎರಡನೇ ಅಂಶಕ್ಕೆ ಹೌದು ಎಂತಲೂ

3) ಮೂರನೇ ಅಂಶಕ್ಕೆ ಮೊದಲಿನ ಭಾಗದ ಪ್ರಶ್ನೆಗೆ ಹೌದು ಎಂದು ಎರಡನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

4) ನಾಲ್ಕನೇ ಅಂಶಕ್ಕೆ ಹೌದು ಎಂತಲೂ

5) ಐದನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಅಂಶ-1**

ವಲಯ ಅರಣ್ಯಾಧಿಕಾರಿ, ತರೀಕೆರೆ ಮತ್ತು ಅವರ ಸಿಬ್ಬಂದಿಯವರು ದಿನಾಂಕ 14.4.96ರಂದು ಬೀಟೆ ಮತ್ತು ಸಾಗುವಾನಿ ಸೈಜುಗಳ ಅಕ್ರಮ ಸಾಗಾಣಿಕೆ ಸಂಬಂಧ ಬಜಾಜ್ ಟೆಂಪೋ ಕೆಎ-05-9989 ನ್ನು ತರೀಕೆರೆ ಲಿಂಗದಹಳ್ಳಿ ರಸ್ತೆ ಗಾಳಿಹಳ್ಳಿ ಕ್ರಾಸ್ ಸಮೀಪ ಪತ್ತೆ ಹಚ್ಚಿ ಅದರಲ್ಲಿದ್ದ 24 ಜೊತೆ ಬೀಟೆ ತುಂಡು ಮತ್ತು 6 ಸಾಗುವಾನಿ ತುಂಡುಗಳನ್ನು ವಶಪಡಿಸಿಕೊಂಡು ಸ್ಥಳದಲ್ಲಿಯೇ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ದಾಖಲು ಮಾಡಿ ಸದರಿ ವಾಹನ ಹಾಗೂ ಬೀಟೆ ಮತ್ತು ಸಾಗುವಾನಿ ತುಂಡುಗಳನ್ನು ಅರಣ್ಯ ಕಾಯ್ದೆ 71(ಎ) ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯಕ್ಕೆ ಮುಂದಿನ ಕ್ರಮಕ್ಕಾಗಿ ಒಪ್ಪಿಸಿರುತ್ತದೆ. ಸದರಿ ವಾಹನವನ್ನು ಹಾಗೂ ಅರಣ್ಯ ಉತ್ಪನ್ನವನ್ನು ವಲಯ ಅರಣ್ಯಾಧಿಕಾರಿ, ತರೀಕೆರೆ ವಲಯ, ತರೀಕೆರೆ ರವರ ವಶಕ್ಕೆ ಸುರಕ್ಷತೆಗೆ ನೀಡಿರುತ್ತದೆ.

ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ದಿನಾಂಕ 16.8.2000 ರಂದು ಶ್ರೀ ಎಸ್.ಓ. ದಿನೇಶ್, ವನಪಾಲಕ, ಪ್ರಾ.ಸಾ.1 ಎಂದು ದಿನಾಂಕ:7.11.2001 ರಂದು ಶ್ರೀ ವೈ.ಕೆ. ಶ್ರೀಧರ್, ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರು ಪ್ರಾ.ಸಾ.2 ಆಗಿ ಸಾಕ್ಷಿ ನುಡಿದಿರುತ್ತಾರೆ. ಅವರ ಹೇಳಿಕೆ ಪ್ರಕಾರ ದಿನಾಂಕ:14.4.96 ರಂದು ಬಂದ ಖಚಿತ ವರ್ತಮಾನದ ಮೇರೆಗೆ ಲಿಂಗದಹಳ್ಳಿ ಕಡೆಯಿಂದ ಒಂದು ವಾಹನ ಬರುವುದನ್ನು ಕಂಡು ನಿಲ್ಲಿಸುವಂತೆ ಸೂಚನೆ ಕೊಟ್ಟೆವು. ಆ ವಾಹನವನ್ನು ನಮ್ಮಿಂದ ಸ್ವಲ್ಪ ಮುಂದೆ ಹೋಗಿ ನಿಲ್ಲಿಸಲಾಯಿತು. ವಾಹನವನ್ನು ನಿಲ್ಲಿಸಿದ ಆಸಾಮಿಗಳು ವಾಹನದಿಂದ ಓಡಿಹೋಗುತ್ತಿದ್ದರು. ಅವರ ಪೈಕಿ 2 ಜನರನ್ನು ಹಿಡಿದುಕೊಂಡೆವು. 3 ಜನರು ಓಡಿ ಹೋದರು. ಆ ಸಿಕ್ಕವರು ಒಬ್ಬ ರಾಮಚಂದ್ರಪ್ಪ ಮತ್ತೊಬ್ಬ ವೆಂಕಟೇಶ್ ಅಂತ ಗೊತ್ತಾಯಿತು. ಓಡಿಹೋದವರು ರಾಮ, ವರದಪ್ಪ ಮತ್ತು ಉಮೇಶ ಅಂತ ಸಿಕ್ಕವರಿಂದ ತಿಳಿಸಿದರು. ಸದರಿ ವಾಹನ ಮಿನಿ ಲಾರಿಯಾಗಿತ್ತು. ಅದರ ನೊಂದಣಿ ಸಂಖ್ಯೆ ಕೆಎ-05-9989 ಆಗಿತ್ತು. ಸದರಿ ಮಿನಿ ಲಾರಿಗೆ ತೆಂಗಿನ ಒಣಗಿದ ಗರಿಗಳನ್ನು ಮುಚ್ಚಲಾಗಿತ್ತು. ಅದನ್ನು ತೆಗೆದುಕೊಂಡು ನೋಡಲಾಗಿ ಅದರಲ್ಲಿ ಬೀಟೆ ಜಾತಿಗೆ ಸೇರಿದ 24 ತುಂಡುಗಳು ಇದ್ದವು ಹಾಗೂ ಸಾಗುವಾನಿ ಜಾತಿಗೆ ಸೇರಿದ 6 ತುಂಡುಗಳು ಇದ್ದವು. ಅವುಗಳ ಮೇಲೆ ಯಾವುದೇ ಛಾಪಾ ವಗೈರೆ ಇರಲಿಲ್ಲ. ಸಿಕ್ಕ ಆಸಾಮಿಗಳು ಅವುಗಳ ಮೇಲೆ ಯಾವುದೇ ರಹದಾರಿ ತೋರಿಸಲಿಲ್ಲ. ನಂತರ ಎಲ್ಲಾ ತುಂಡುಗಳಿಗೆ ಹಳದಿ ಆಯಿಲ್ ಚಾಕ್‌ಪೀಸ್‌ನಿಂದ ಕ್ರಮಸಂಖ್ಯೆ ಕೊಟ್ಟು ಅವುಗಳ ಮೇಲೆ ಇಲಾಖಾ ಛಾಪಾ ಕೆ ಎನ್ ಎಫ್ ಡಿ 20 ಬಿಬಿ ಅಂತ ಗುರುತನ್ನು ಹಾಕಲಾಯಿತು. ಸಿಕ್ಕ ಆಸಾಮಿಗಳು, ಸದರಿ ಮರದ ತುಂಡುಗಳನ್ನು ಕಡಿಮೆ ಬೆಲೆಯಲ್ಲಿ ಓಡಿ ಹೋದ ಆಸಾಮಿಗಳು ಕೊಟ್ಟಿದ್ದರಿಂದ ಮಲ್ಲೇನಹಳ್ಳಿಯಿಂದ ತುಂಬಿಕೊಂಡು ಬೆಂಗಳೂರಿಗೆ ಒಯ್ಯುತ್ತಿದ್ದುದಾಗಿ ಹೇಳಿದರು. ಈ ಬಗ್ಗೆ ಸ್ಥಳದಲ್ಲಿ ಮಹಜರನ್ನು ಮಾಡಲಾಯಿತು. ಸದರಿ ಮಹಜರ್‌ನ ಈಗ ನೋಡುತ್ತಿದ್ದು ಅದನ್ನು ನಿಶಾನೆ ಪಿ1 ಅಂತ ಸಾಕ್ಷಿಯ ಸಹಿಯನ್ನು ಕ್ರಮವಾಗಿ ಪಿ1ಎ ಮತ್ತು ಪಿ1ಬಿ ಅಂತ ಗುರುತಿಸಲಾಯಿತು. ನಂತರ ವಾಹನ ಹಾಗೂ ಅದರಲ್ಲಿದ್ದ ಬೀಟೆ, ಸಾಗುವಾನಿ ತುಂಡುಗಳನ್ನು ಮತ್ತು ಸಿಕ್ಕ 2 ಜನ ಆಸಾಮಿಗಳನ್ನು ವ ಅ ಅ ಕಛೇರಿಗೆ ಕರೆದುಕೊಂಡು ತರಲಾಯಿತು. ಆ ಕಾಲಕ್ಕೆ ಶ್ರೀಧರ್ ಅನ್ನುವವರು ಆರ್.ಎಫ್.ಓ. ಅಂತ ಇದ್ದರು. ಸದರಿ ಶ್ರೀಧರ್ ರವರೆ ಕೇಸನ್ನು ನೋಂದಾಯಿಸಿಕೊಂಡು ಪ್ರಥಮ ವರ್ತಮಾನ ವರದಿಯನ್ನು, ಸದರಿ ಪ್ರಥಮ ವರ್ತಮಾನ ವರದಿಯನ್ನು ನಿಶಾನೆ ಪಿ3 ಅಂತ ಹಾಗೂ ಸದರಿ ಶ್ರೀಧರ್‌ರವರ ಸಹಿಯನ್ನು ನಿಶಾನೆ ಪಿ2ಎ ಅಂತ ಗುರುತಿಸಲಾಯಿತು. ಮಾಲು ಜಪ್ತಿ ವರದಿಯನ್ನು ಸದರಿ ಶ್ರೀಧರ್ ರವರು ಸಲ್ಲಿಸಿದ್ದು, ಅದನ್ನು ನಿಶಾನೆ ಪಿ2 ಮತ್ತು ಸಹಿಯನ್ನು ಪಿ3ಎ ಅಂತ ಗುರುತಿಸಲಾಯಿತು. ಆ ದಿನ ವಶಪಡಿಸಿಕೊಳ್ಳಲಾದ ವಾಹನ ಹಾಗೂ ಮರದ ತುಂಡುಗಳನ್ನು ನೋಡಿದರೆ ಗುರುತಿಸುತ್ತೇನೆ. ಮಹಜರ್ ಕಾಲಕ್ಕೆ ಅಲ್ಲಿ ಇದ್ದ ಸಾರ್ವಜನಿಕರನ್ನು ಕರೆಯಲಾಗಿ ಅವರು ಬರದೆ ಇದ್ದುದರಿಂದ ಇಲಾಖೆಯವರೇ ಪಂಚನಾಮೆಗೆ ಸಹಿ ಮಾಡಿಸಲಾಯಿತು.

ಪಾಟೀ ಸವಾಲಿನಲ್ಲಿ ನಾವು ಮಲ್ಲೇನಹಳ್ಳಿಗೆ ಹೋಗಲಿಲ್ಲ. ಮಲ್ಲೇನಹಳ್ಳಿಯು ಆ ಒಂದು ತೋಟದಿಂದ ತುಂಡುಗಳನ್ನು ತಂದಿರುವುದಾಗಿ ಹೇಳಿದರು. ಸದರಿ ತುಂಡುಗಳು ನಾವು ಹಿಡಿದ ಆಸಾಮಿಗಳಾದ ರಾಮಚಂದ್ರಪ್ಪ ಮತ್ತು ವೆಂಕಟೇಶ್‌ರವರಿಗೆ ಸೇರಿದವು ಅಂತ ತಿಳಿಯಿತು. ನಾವು ಗಾಳಿಹಳ್ಳಿ ಕ್ರಾಸ್‌ನಲ್ಲಿ ಮಹಜರ್ ಮಾಡಿದೆವು ಅಲ್ಲಿಂದ 50 ಮೀಟರ್ ಅಂತರದಲ್ಲಿ ಗ್ರಾಮ ಇದೆ. ಅಲ್ಲಿಯ ಸಾರ್ವಜನಿಕರು ನಾವು ವಾಹನವನ್ನು ಹಿಡಿದಿದ್ದನ್ನು ನೋಡಿದ್ದಾರೆ. ಮರಗಳನ್ನು ಕೊಯ್ಯಲು ಉಪಯೋಗಿಸುವ ಸಾಧನಗಳು ವಾಹನದಲ್ಲಿ ಇರಲಿಲ್ಲ. ಮಹಜರನ್ನು ಎಸ್ ಓ ದಿನೇಶ್

ಬರೆದರು. ತುಂಡುಗಳ ಅಳತೆಯನ್ನು ಯಾರು ಮಾಡಿದರು ಹಾಗೂ ಮಾರ್ಕನ್ನು ಯಾರು ಹಾಕಿದರು ಎನ್ನುವುದನ್ನು ಈಗ ಹೇಳಲು ನೆನಪಿಲ್ಲ. ಮಹಜರ್ ಕ್ರಮವನ್ನು 3-30 ರಿಂದ 4-30 ರ ವರೆಗೆ ಮಾಡಲಾಯಿತು. ರಸ್ತೆ ಬದಿಯಲ್ಲಿ ಬಿದ್ದಿದ್ದ ತುಂಡುಗಳನ್ನು ಲಾರಿಗೆ ಹಾಕಿ ನಾವು ಸುಳ್ಳು ಕೇಸು ಮಾಡಿದ್ದೇವೆ ಅನ್ನುವುದು ಸರಿಯಲ್ಲ. ಮಹಜರನ್ನು ಕಚೇರಿಯಲ್ಲಿಯೇ ಸೃಷ್ಟಿ ಮಾಡಲಾಗಿದೆ ಅನ್ನುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಪಿ ಡಬ್ಲ್ಯೂ 1 ಮತ್ತು ಪಿ ಡಬ್ಲ್ಯೂ 2 ಸಾಕ್ಷಿದಾರರ ಹೇಳಿಕೆಗಳನ್ನು ಪರಿಶೀಲಿಸಿ ನೋಡಿದಾಗ ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅಲ್ಲದೇ ಸದರಿ ಮೇಲ್ಕಂಡ ವಾಹನದಲ್ಲಿ ಅಕ್ರಮವಾಗಿ ಅರಣ್ಯ ಉತ್ಪನ್ನ ಸಾಗಾಣಿಕೆ ಮಾಡಿರುವುದು, ಎಲ್ಲಾ ಅಧಿಕೃತ ದಾಖಲಾತಿಗಳನ್ನು ಸಾಕ್ಷಿ ರೂಪವಾಗಿ ಹಾಜರುಪಡಿಸಿ ಗುರುತಿಸಿಕೊಂಡು ಸಂಶಯರಹಿತವಾಗಿ ರುಜುವಾತುಪಡಿಸಿರುತ್ತಾರೆ. ಆದ್ದರಿಂದ ಅಂಶ-ಒಂದಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ 407 ವ್ಯಾನು ಕೆಎ-05-9988 ರ ಮಾಲೀಕರವರಾದ ಶ್ರೀ ರಾಮಚಂದ್ರಪ್ಪ ಬಿನ್ ಭೈರಪ್ಪ, ಬೆಂಗಳೂರು ಇವರು ದಿನಾಂಕ 3.5.96 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು ದಿನಾಂಕ:9.5.1996 ರಂದು ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಮತ್ತು ದಿನಾಂಕ 15.5.96 ರಂದು ಅರ್ಜಿದಾರರ ಅರ್ಜಿಯನ್ನು ಪುರಸ್ಕರಿಸಿ ವಿಚಾರಣೆಯನ್ನು ಬಾಕಿಯಿರಿಸಿಕೊಂಡು ತಾತ್ಕಾಲಿಕವಾಗಿ ವಾಹನವನ್ನು ಬಿಡುಗಡೆ ಮಾಡಿರುತ್ತದೆ. ಅಲ್ಲದೇ ತದನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಈ ಪ್ರಾಧಿಕಾರದಲ್ಲಿ ನಡೆದ ವಿಚಾರಣೆಗೆ ಅರ್ಜಿದಾರರು ಹಾಗೂ ಅವರ ನ್ಯಾಯವಾದಿಗಳು ಹಾಜರಾಗಿರುತ್ತಾರೆ. ಆದಕಾರಣ ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಬಿ) ಪ್ರಕಾರ ಆರ್.ಸಿ. ಮಾಲೀಕರವರಿಗೆ ಅವಕಾಶ ನೀಡಿರುವುದಾಗಿ ತೀರ್ಮಾನಿಸಿರುತ್ತೇನೆ. ಆದಕಾರಣ ಅಂಶ-2ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-3:**

ವಾಹನದ ಆರ್.ಸಿ. ಮಾಲೀಕರಾದ ಶ್ರೀ ರಾಮಚಂದ್ರಪ್ಪ ಬಿನ್ ಭೈರಪ್ಪ, ಬೆಂಗಳೂರು ಇವರು ದಿನಾಂಕ: 3.5.96 ರಂದು ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸಿ ಪ್ರಕರಣದಲ್ಲಿ ಅಮಾನತ್ತುಪಡಿಸಿದ ನೋಂದಾವಣೆ ಸಂಖ್ಯೆ: ಬಜಾಜ್ ಟೆಂಪೋ ಕೆಎ-06-9980 ನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ. ಅರ್ಜಿದಾರರ ಅರ್ಜಿಯನ್ನು ಪರಿಶೀಲಿಸಿ ಅರ್ಜಿದಾರ / ವಾಹನದ ಮಾಲೀಕರು ಈ ಪ್ರಕರಣದಲ್ಲಿ ನೇರವಾಗಿ ಭಾಗಿ ಆಗಿ ಅಪರಾಧಿಗಳಾಗಿದ್ದು, ಮತ್ತು ವಾಹನವು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಅಪರಾಧ ಪ್ರಕರಣದಲ್ಲಿ ಭಾಗಿ ಆಗಿಲ್ಲವೆಂಬ ಬಗ್ಗೆ ಯಾವುದೇ ಸಾಕ್ಷ್ಯಾಧಾರಗಳು ಒದಗಿಸದೇ ಇರುವುದರಿಂದ ಅರ್ಜಿದಾರರು ಹಾಗೂ ಅವರ ವಾಹನವು ಮೇಲ್ಕಂಡ ಅಪರಾಧ ಪ್ರಕರಣದಲ್ಲಿ ಭಾಗಿ ಆಗಿರುವುದು ಮೇಲು ನೋಟಕ್ಕೆ ಕಂಡುಬಂದಿದ್ದರಿಂದ ವಾಹನದ ಮಾಲೀಕರು ಶಿವಮೊಗ್ಗ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ಕೆಲವೊಂದು ಷರತ್ತುಗಳನ್ನು ಹೊರಡಿಸಿ ವಾಹನವನ್ನು ತಾತ್ಕಾಲಿಕ ಬಿಡುಗಡೆಗೆ ಆದೇಶಿಸಿರುತ್ತದೆ. ವಾಹನದ ಮಾಲೀಕರು ಷರತ್ತುಗಳನ್ನು ಪೂರೈಸಿ ವಾಹನವನ್ನು ತಾತ್ಕಾಲಿಕ ವಶಕ್ಕೆ ಪಡೆದಿರುತ್ತಾರೆ. ಮುಂದುವರೆದು, ಈ ಪ್ರಕರಣದಲ್ಲಿ ಅಂತಿಮ ತೀರ್ಮಾನದ ಬಗ್ಗೆ ಅರ್ಜಿದಾರ / ವಾಹನದ ಮಾಲೀಕರಿಗೆ ನೋಟೀಸ್ ನೀಡಿ ವಾಹನದ ಮಾಲೀಕರ ಹೇಳಿಕೆಯನ್ನು ದಾಖಲಿಸಿರುತ್ತದೆ. ವಾಹನದ ಮಾಲೀಕರು ದಿನಾಂಕ:20.2.2002 ರಂದು ಪಿಡಬ್ಲ್ಯೂ 1 ಎಂದು ಸಾಕ್ಷಿದಾರರಾಗಿ ಹೇಳಿಕೆ ನೀಡಿರುತ್ತಾರೆ. ಅವರ ಹೇಳಿಕೆ ಪ್ರಕಾರ ನನಗೆ ಸೇರಿದ ಮೆಟಾಡೋರ್ ವ್ಯಾನ್ ಇದ್ದು, ಅದರ ಸಂಖ್ಯೆ ಕೆಎ-05-9989 ಆಗಿದೆ. ದಿನಾಂಕ 13.4.96 ರಂದು ಈ ಮೇಲೆ ಹೇಳಿದ ನನ್ನ ವಾಹನದಲ್ಲಿ ಬೆಂಗಳೂರಿನಿಂದ ಹಾಸನಕ್ಕೆ ರೋಲಿಂಗ್ ಶೆಟರ್ಸ್‌ಗಳನ್ನು ಹೇರಿಕೊಂಡು ತಂದಿದ್ದೆವು. ಹಾಸನದಿಂದ ಚಿಕ್ಕಮಗಳೂರಿಗೆ ತರಕಾರಿ ಲೋಡ್ ಸಿಕ್ಕಿದ್ದರಿಂದ ನಂತರ ಚಿಕ್ಕಮಗಳೂರಿಗೆ ತರಕಾರಿ ಹೇರಿಕೊಂಡು ಬಂದೆವು. ಚಿಕ್ಕಮಗಳೂರಿನಲ್ಲಿ ತರಕಾರಿ ಖಾಲಿ ಮಾಡಿ ಖಾಲಿ ವ್ಯಾನನ್ನು ತೆಗೆದುಕೊಂಡು ಲಿಂಗದಹಳ್ಳಿಗೆ ಬಂದೆವು. ಅಲ್ಲಿಗೆ ಬಂದಾಗ ಅಲ್ಲಿ 4 ಜನ ಇದ್ದರು. ಅವರು ನನ್ನ ವ್ಯಾನಿನಲ್ಲಿ ಕಟ್ಟಿಗೆ ತುಂಡುಗಳು ಇವೆ ಹಾಕಬೇಕು ಅಂತ ಹೇಳುತ್ತಿದ್ದರು. ಅಷ್ಟರಲ್ಲಿ ಜೀಪು ಬಂದಿದ್ದನ್ನು ನೋಡಿ ಅವರು ಅಲ್ಲಿಂದ ಓಡಿ ಹೋದರು ಅರಣ್ಯ ಇಲಾಖೆಯಲ್ಲಿ ಜೀಪಿನಲ್ಲಿ ಬಂದವರು ಯಾಕೆ ಜೀಪನ್ನು ತಂದಿದ್ದೀಯಾ ಅಂತ ವಿಚಾರ ಮಾಡಿದರು. ಆಗ ನಾನು ಇದ್ದ ವಿಚಾರವನ್ನು ತಿಳಿಸಿದಾಗ ಅವರು ಕೇಳದೇ ನನ್ನನ್ನು ಜೀಪಿನಲ್ಲಿ ಕರೆದುಕೊಂಡು ಬಂದರು, ನಂತರ ನನ್ನ ವ್ಯಾನನ್ನು ಅಲ್ಲಿಗೆ ತಂದರು. ನಂತರ ನನ್ನ ವಾಹನವನ್ನು ಅರ್ಜಿ ಸಲ್ಲಿಸಿ ನ್ಯಾಯಾಲಯದಿಂದ ಮಧ್ಯಂತರ ದಾವಾಕ್ಕೆ ಪಡೆದುಕೊಂಡಿರುತ್ತೇನೆ. ನನಗೆ ಚಾಲನೆ ಕೆಲಸವನ್ನು ಬಿಟ್ಟರೆ ಬೇರೆ ಉದ್ಯೋಗ ಬರುವುದಿಲ್ಲ. ಆದ್ದರಿಂದ ನನ್ನ ವಾಹನವನ್ನು ಬಿಟ್ಟುಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ನನ್ನ ವಾಹನದ ಆರ್.ಸಿ. ಜೆರಾಕ್ಸ್ ಹಾಜರುಪಡಿಸಿದ್ದು, ಅದನ್ನು ಮೂಲ ಆರ್.ಸಿ. ಪುಸ್ತಕ ನ್ಯಾಯಾಲಯಕ್ಕೆ ಹಾಜರುಪಡಿಸುವ ಷರತ್ತಿಗೆ ಒಳಪಟ್ಟು ನಿಶಾನೆ ಪಿ1 ಅಂತ ಗುರುತಿಸಲಾಗಿದೆ. ನನ್ನ ವಾಹನದ ಮೇಲೆ ಕೆ ಎಸ್ ಎಫ್ ಸಿ ಯಿಂದ ಸಾಲವನ್ನು ಪಡೆದಿದ್ದು, ಇನ್ನೂ ಸಾಲ ತುಂಬುವುದು ಇದೆ.

ಸಹಾಯಕ ಸರ್ಕಾರಿ ಅಭಿಯೋಜಕರು ಇವರ ಪಾಟೀ ಸವಾಲಿನಲ್ಲಿ ನನ್ನ ಮೆಟಡೋರ್ ವಾಹನವನ್ನು ಸರಕು ಸಾಗಾಣಿಕೆಗಾಗಿ ಇಟ್ಟುಕೊಂಡಿದ್ದೇನೆ. ನಾನು ಸರಕು ಸಾಗಾಣಿಕೆಗೋಸ್ಕರ ವಾಹನವನ್ನು ಉಪಯೋಗಿಸುವುದಾಗಿ ಆರ್.ಸಿ. ಪುಸ್ತಕದಲ್ಲಿ ನಮೂದಿಸಿರುತ್ತೇನೆ. ನಾನು ಬೆಂಗಳೂರಿನಿಂದ ಹಾಸನಕ್ಕೆ ರೋಲಿಂಗ್ ಶೆಟ್ಟರ್ ಪಟ್ಟಿಯನ್ನು ಸಾಗಿಸಿದ್ದಕ್ಕೆ ದಾಖಲೆಗಳು ಇದೆ ಅವುಗಳನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿಲ್ಲ. ಆದರೆ ಅದನ್ನು ಹಾಜರುಪಡಿಸುತ್ತೇನೆ. ನಾವು ಯಾವುದೇ ಸರಕುಗಳನ್ನು ಸಾಗಾಣಿಕೆ ಮಾಡಬೇಕಾದರೆ ದಾಖಲೆಗಳನ್ನು ಇಟ್ಟುಕೊಳ್ಳಬೇಕಾಗಿರುವುದು ನಿಜ. ನಾನು ಹಾಸನದಿಂದ ಚಿಕ್ಕಮಗಳೂರಿಗೆ ಟೊಮೋಟೊ ಹಣ್ಣನ್ನು ಸಾಗಿಸಿದ್ದು ಕಮೀಷನ್ ಏಜೆಂಟ್ ಮುಖಾಂತರ. ಆದರ ಬಗ್ಗೆ ನನ್ನ ಹತ್ತಿರ ಯಾವುದೇ ದಾಖಲೆ ಇರುವುದಿಲ್ಲ. ನಾವು ಚಿಕ್ಕಮಗಳೂರಿನಿಂದ ಬೆಂಗಳೂರಿಗೆ ಹೋಗಬೇಕಾದರೆ ಲಿಂಗದಹಳ್ಳಿಯಲ್ಲಿ ಯಾರನ್ನೋ ಮಾತನಾಡಿಸಬೇಕಾಗಿದ್ದರಿಂದ ನಾನು ಲಿಂಗದಹಳ್ಳಿಗೆ ಬಂದೆ, ಅಲ್ಲಿ ಲಿಂಗದಹಳ್ಳಿಯಲ್ಲಿ ಯಾರನ್ನೋ ಮಾತನಾಡಿಸಬೇಕಾಗಿತ್ತು ಅವರ ಹೆಸರು ನನಗೆ ಗೊತ್ತಿಲ್ಲ. ನಾನು ಹೇಳುವಂತ ವ್ಯಕ್ತಿ ಬಹಳಷ್ಟು ಪರಿಚಯಸ್ಥರಿದ್ದು, ಅವರು ಬೆಂಗಳೂರಿನಿಂದ ಮನೆಯನ್ನು ಖಾಲಿ ಮಾಡಿಕೊಂಡು ಲಿಂಗದಹಳ್ಳಿಗೆ ಬಂದಿದ್ದರು. ಲಿಂಗದಹಳ್ಳಿಯಲ್ಲಿ ಅವರ ಅಡ್ರೆಸ್ ಸಹ ನನಗೆ ಗೊತ್ತಿಲ್ಲ. ಅವರ ಅಡ್ರೆಸನ್ನು ಕೇಳಿಕೊಂಡು ಬರುತ್ತಿದ್ದಾಗ ನನ್ನನ್ನು ಅರಣ್ಯ ಇಲಾಖೆಯವರು ಹಿಡಿದುಕೊಂಡರು. ಮರವನ್ನು ತುಂಬುವ ಪಾರ್ಟಿಗಳು ನಮ್ಮನ್ನು ಬಾಡಿಗೆಗೆ ಬರುತ್ತೀಯಾ ಎಂದು ಕೇಳುವಷ್ಟರಲ್ಲಿ ನಮ್ಮನ್ನು ಅರಣ್ಯ ಇಲಾಖೆಯವರು ಹಿಡಿದುಕೊಂಡರು. ಫಾರೆಸ್ಟರ್‌ನವರು ನನ್ನನ್ನು ಹಿಡಿದುಕೊಂಡ ನಂತರ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ. ನಮ್ಮ ಲಾರಿಯನ್ನು ಸಹ ಸೀಜ್ ಮಾಡಿದರು. ನಮ್ಮನ್ನು ಮಧ್ಯಾಹ್ನ 3-30 ಗಂಟೆ ಸಮಯದಲ್ಲಿ ಹಿಡಿದರು. ಪಾರ್ಟಿ ಓಡಿ ಹೋದರು ನನ್ನನ್ನು ಮತ್ತು ಲಾರಿಯ ಸಮೇತ ತರೀಕೆರೆ ಅರಣ್ಯ ಇಲಾಖೆಗೆ ತಂದರು. ನನ್ನ ಲಾರಿಯಲ್ಲಿ 24 ಬೀಟೆ, 5 ಸಾಗುವಾನಿ ತುಂಡು ಇತ್ತು. ಫಾರೆಸ್ಟ್‌ನವರು ಲೆಕ್ಕಮಾಡಿದರು ನಾವು ನೋಡಲಿಲ್ಲ. ನಮಗೆ ಮರದ ಕಡೆಯವರು ಯಾವುದೇ ದಾಖಲೆಗಳನ್ನು ತೋರಿಸಲಿಲ್ಲ. ಅಷ್ಟು ಹೊತ್ತಿಗೆ ಫಾರೆಸ್ಟ್‌ನವರು ಬಂದು ನಮ್ಮನ್ನು ಹಿಡಿದುಕೊಂಡರು. ನಾನು ಮತ್ತು ವೆಂಕಟೇಶ್ ಮತ್ತು ಇತರೆ ಇಬ್ಬರ ಮೇಲೆ ಪ್ರಕರಣವನ್ನು ದಾಖಲಿಸಿಕೊಂಡಿದ್ದಾರೆ. ಓಡಿ ಹೋದ ವ್ಯಕ್ತಿಗಳು, ರಾಮ, ವರದಪ್ಪ, ಉಮೇಶ ಎಂಬುದು ನನಗೆ ಗೊತ್ತಿಲ್ಲ.

ನಾನು ಮತ್ತು ನನ್ನ ಕ್ಲೀನರ್ ಮತ್ತು ಓಡಿ ಹೋದ 3 ಜನರು ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿದ್ದಾರೆ ಎಂದು ಹೇಳುವುದು ಸರಿಯಲ್ಲ. ಟ್ರಾನ್ಸ್‌ಪೋರ್ಟ್ ಬಿಸಿನೆಸ್‌ನ್ನು 14 ವರ್ಷಗಳಿಂದ ಮಾಡುತ್ತಿದ್ದೇನೆ ಅನಧಿಕೃತ ಮರಗಳನ್ನು ಸಾಗಿಸುವುದು ತಪ್ಪು ಎಂಬುದು ನನಗೆ ಗೊತ್ತು. ಬಾಡಿಗೆಗೆ ಬರುತ್ತೀಯಾ ಎಂದು ಕೇಳುತ್ತಿದ್ದ ಸಮಯದಲ್ಲಿ ಮರ ಲಾರಿಯಿಂದ ಸ್ವಲ್ಪ ದೂರದಲ್ಲಿ ಮರ ಇತ್ತು. ಮೆಟಡೋರ್ ವಾಹನದಲ್ಲಿ ಮೇಲೆ ಹೇಳಿದ ಮರಗಳು ಇತ್ತು ಎಂದು ಹೇಳುವುದು ಸರಿಯಲ್ಲ ಎಂದು ಹೇಳಿಕೆ ನೀಡಿರುತ್ತಾರೆ.

ಮೇಲ್ಕಂಡ ಅರ್ಜಿದಾರರ ಅರ್ಜಿ ಹಾಗೂ ನ್ಯಾಯಾಲಯದಲ್ಲಿ ನೀಡಿದ ಹೇಳಿಕೆಗಳು ಮತ್ತು ಅರಿದಾರರು ನ್ಯಾಯಾಲಯಕ್ಕೆ ನೀಡಿದ ದಾಖಲಾತಿಗಳನ್ನು ಪರಿಶೀಲಿಸಿದಾಗ ವಾಹನದ ಮಾಲೀಕರು ದಿನಾಂಕ 13.4.96 ರಂದು 407 ವ್ಯಾನ್ ನಂ: ಕೆ ಎ 05-9989 ರಲ್ಲಿ ಬೆಂಗಳೂರಿನಿಂದ ಹಾಸನಕ್ಕೆ ರೋಲಿಂಗ್ ಶೆಟ್ಟರ್‌ಗಳನ್ನು ಹೇರಿಕೊಂಡು ತಂದಿದ್ದು, ಹಾಸನದಿಂದ ಚಿಕ್ಕಮಗಳೂರಿಗೆ ತರಕಾರಿ ಲೋಡ್ ಸಿಕ್ಕಿದ್ದರಿಂದ ಚಿಕ್ಕಮಗಳೂರಿಗೆ ತರಕಾರಿ ಲೋಡ್ ಸಾಗಾಣಿಕೆ ಮಾಡಿರುತ್ತೇನೆ ಎಂದು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ಯಾವುದಾದರೂ ದಾಖಲಾತಿಗಳು ಇದೆಯೇ ಎಂಬ ಬಗ್ಗೆ ಯಾವುದು ಇಲ್ಲಾ ಎಂದು ತಿಳಿಸಿರುತ್ತಾರೆ. ಚಿಕ್ಕಮಗಳೂರಿನಿಂದ ಲಿಂಗದಹಳ್ಳಿಗೆ ಯಾಕೆ ಬಂದಿರುತ್ತೀರಿ ಎಂದು ಕೇಳಿದಾಗ ಯಾರನ್ನೊ ಮಾತನಾಡಿಸಬೇಕಾಗಿದ್ದರಿಂದ ನಾನು ಲಿಂಗದಹಳ್ಳಿಗೆ ಬಂದೆ. ಅವರು ಯಾರು ಎಂದು ಕೇಳಿದಾಗ ಅವರ ಹೆಸರು ಗೊತ್ತಿಲ್ಲ ಎಂದು ಹೇಳಿರುತ್ತಾರೆ ಹಾಗೂ ಅವರು ಬಹಳ ಪರಿಚಯಸ್ಥರು ಎಂದು ಸಹ ಹೇಳಿರುತ್ತಾರೆ. ಲಾರಿಯ ಸಮೇತ ಅರ್ಜಿದಾರರನ್ನು ವಲಯ ಅರಣ್ಯಾಧಿಕಾರಿ, ತರೀಕೆರೆ ಕಚೇರಿ ಆವರಣಕ್ಕೆ ತಂದಾಗ ಲಾರಿಯಲ್ಲಿ 24 ಬೀಟೆ ಮತ್ತು 5 ಸಾಗುವಾನಿ ತುಂಡುಗಳು ಇತ್ತು ಎಂದು ಹೇಳಿಕೆ ನೀಡಿರುತ್ತಾರೆ. ಅಲ್ಲದೇ ಸದರಿ ಮಾಲುಗಳಿಗೆ ಯಾವುದೇ ರಹದಾರಿ ಇಲ್ಲವೆಂದು ಹೇಳಿರುತ್ತಾರೆ. ಅರ್ಜಿದಾರರು ಸುಮಾರು 14 ವರ್ಷದಿಂದ ಟ್ರಾನ್ಸ್‌ಪೋರ್ಟ್ ವ್ಯವಹಾರ ಮಾಡುತ್ತಿರುವುದಾಗಿ ತಿಳಿಸಿರುತ್ತಾರೆ. ವಾಹನದ ಮಾಲೀಕರು ಮೂಲ ಆರ್.ಸಿ.ಪುಸ್ತಕ ನ್ಯಾಯಾಲಯಕ್ಕೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅರ್ಜಿದಾರರು ಈ ನ್ಯಾಯಾಲಯಕ್ಕೆ ಅವರ ವಾಹನವು ಅಪರಾಧ ಪ್ರಕರಣದಲ್ಲಿ ಭಾಗಿ ಆಗಿಲ್ಲ ಎಂಬ ಬಗ್ಗೆ ಒಂದೇ ಒಂದು ಸಾಕ್ಷಿಯನ್ನು ಸಹ ಹಾಜರುಪಡಿಸಿರುವುದಿಲ್ಲ ಮತ್ತು ಅವರು ನ್ಯಾಯಾಲಯಕ್ಕೆ ಸಲ್ಲಿಸಿರುವ ಅರ್ಜಿ ಹಾಗೂ ಹೇಳಿಕೆಗಳು ಒಂದು ಕಟ್ಟುಕತೆ ಎಂಬುದು ಸ್ಪಷ್ಟವಾಗಿ ತಿಳಿದುಬಂದಿರುತ್ತದೆ ಹಾಗೂ ಟೆಂಪೋ ಮಾಲೀಕ ಮತ್ತು ನಿರ್ವಾಹಕ ಶಾಮೀಲಾಗಿ ಈ ಕೃತ್ಯ ಎಸಗಿರುತ್ತಾರೆಂದು ಅಭಿಪ್ರಾಯಪಡುತ್ತೇನೆ.

ವಾಹನ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಅಥವಾ ಅದಕ್ಕೆ ಸಂಬಂಧಪಟ್ಟವರು ವಾಹನವನ್ನು ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ರಹದಾರಿ ಇಲ್ಲದೇ ಕಳ್ಳ ಸಾಗಾಣಿಕೆಗೆ ಬಳಸಿದಾಗ ಅದು ತಮ್ಮ ಗಮನಕ್ಕೆ ಬಾರದಂತೆ ಕೃತ್ಯವು ನಡೆದಿದೆ ಎಂಬುದನ್ನು ಸಮರ್ಥಿಸುವ ಸಾಕ್ಷ್ಯಾಧಾರಗಳನ್ನು ವಾಹನ ಮಾಲೀಕರು ನೀಡಿರುವುದಿಲ್ಲ. ಅಲ್ಲದೇ ಈ ವಾಹನದಲ್ಲಿ ಸಾಗುವಾನಿ ಮತ್ತು ಬೀಟೆ ತುಂಡುಗಳು ಅಕ್ರಮ ಸಾಗಾಣಿಕೆಗೆ ಬಳಕೆಯಾಗದಂತೆ ವಾಹನ ಮಾಲೀಕರು ಅಥವಾ ಅವರ ಪ್ರತಿನಿಧಿಗಳು ಯಾವುದೇ ಮುನ್ನೆಚ್ಚರಿಕೆ ವಹಿಸಿದ ಬಗ್ಗೆ ಸಮರ್ಪಕವಾದ ಸಾಕ್ಷ್ಯಾಧಾರ ನೀಡಿರುವುದಿಲ್ಲ. ವಾಹನದಲ್ಲಿ ತನ್ನ ಗಮನಕ್ಕೆ ಬಾರದಂತೆ ಈ ಕೃತ್ಯ ನಡೆದಿದೆ ಎಂಬುದನ್ನು ಕರ್ನಾಟಕ ಅರಣ್ಯ ಕಾಯಿದೆ ಕಲಂ 71(ಬಿ) (2)ರ ರೀತ್ಯಾ ಸಾಬೀತುಪಡಿಸುವ ಜವಾಬ್ದಾರಿ ವಾಹನ ಮಾಲೀಕರಿಗೆ ಸೇರಿದ್ದಾಗಿರುತ್ತದೆ. ಅಲ್ಲದೇ ವಾಹನ ಮಾಲೀಕ ಏಜೆಂಟರಾಗಲೀ, ಚಾಲಕನಾಗಲೀ ಅಥವಾ ಇತರೆ ನಂಬಿಕೆ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮ ಸಾಗಾಣಿಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು ಸಹಾ ಅವರುಗಳ ಜವಾಬ್ದಾರಿಯಾಗಿರುತ್ತದೆ.

"Without prejudice to the provisions of sub-section (1), no order confiscating any tool, rope, chain, boat, vehicle or cattle shall be made under section 71A if the owner of the tool,rope,chain,boat,vehicle or cattle proves to the satisfaction of the authorised officer that it was used in carrying the timber, sandalwood, charcoal, firewood or ivory without the knowledge or connivance of the owner himself, his agent, if any, and the person in charge of the tool,rope,chain,boat,vehicle or cattle and that each of them had taken all reasonable and necessary precautions against such use".

ಹಾಲಿ ಈ ಪ್ರಕರಣದಲ್ಲಿ ಆ ಜವಾಬ್ದಾರಿಯನ್ನು ನಿಭಾಯಿಸುವಲ್ಲಿ ಅರ್ಜಿದಾರರು ಮತ್ತು ವಾಹನದ ಮಾಲೀಕರು ವಿಫಲರಾಗಿರುತ್ತಾರೆ. ಹಾಲಿ ಈ ಪ್ರಕರಣಕ್ಕೆ ಮೇಲೆ ಹೇಳಿದ ಕೇರಳ ರಾಜ್ಯದ ತೀರ್ಮಾನ ಕ್ರೈಮ್ಸ್ 2000(3) ಪುಟ 563 ಅತ್ಯಂತ ಸರಿಹೊಂದುವಂತಹ ತೀರ್ಪಾಗಿರುತ್ತದೆ. ಅದರ ಉದ್ಧೃತ ಭಾಗ ಈ ಕೆಳಕಂಡಂತಿದೆ.

"The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is caught in the nefarious act of carrying illicit forest produce, it is not enough that the owner establishes his innocence alone. If he wants to retrieve his vehicle he must show further that the person who was incharge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended, by providing such stringent conditions, to prevent harder consequences for the society and for the posterity".

ಹಾಲಿ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಮಾಲೀಕರು ಈ ನ್ಯಾಯಾಲಯಕ್ಕೆ ಸಲ್ಲಿಸಿದ ಅರ್ಜಿ ಮತ್ತು ವಾಹನ ಮಾಲೀಕರು ಮತ್ತು ವಾಹನ ಮಾಲೀಕರ ಪರವಾಗಿ ಹೇಳಿಕೆ ನೀಡಿದ ಸಾಕ್ಷಿದಾರರು ಈ ನ್ಯಾಯಾಲಯದಲ್ಲಿ ನುಡಿದ ಸಾಕ್ಷಿಗಳನ್ನು ಗಮನಿಸಿದಾಗ ಒಂದಕ್ಕೊಂದು ತಾಳೆಯಿಲ್ಲದೇ ವಾಹನವನ್ನು ಬಿಡಿಸಿಕೊಳ್ಳಲು ಸೃಷ್ಟಿಸಿದ ಕಟ್ಟುಕತೆ ಎಂದು ಹಾಗೂ ವಾಹನದಲ್ಲಿ ಸಾಗುವಾನಿ ಮತ್ತು ಬೀಟೆ ತುಂಡುಗಳ ಅಕ್ರಮ ಸಾಗಾಣಿಕೆಯು ವಾಹನ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿದೆಯೆಂದು ಅಭಿಪ್ರಾಯಪಡುತ್ತೇನೆ.

ಈ ಮೇಲಿನ ಎಲ್ಲಾ ಕಾರಣಗಳಿಂದಾಗಿ 3ನೇ ಅಂಶದ ಮೊದಲಿನ ಭಾಗದ ಪ್ರಶ್ನೆಗೆ ನನ್ನ ಉತ್ತರ ಹೌದು ಎಂದು, ಎರಡನೇ ಭಾಗದ ಪ್ರಶ್ನೆಗೆ ನನ್ನ ಉತ್ತರ ಇಲ್ಲವೆಂದು ಅಭಿಪ್ರಾಯಪಡುತ್ತೇನೆ.

**ಅಂಶ-4**

ದಿನಾಂಕ: 14.4.96 ರಂದು 407 ವ್ಯಾನ್ ಬಜಾಜ್ ಟೆಂಪೋ ನಂ: ಕೆ ಎ-05-9989 ರಲ್ಲಿ ಅಕ್ರಮವಾಗಿ ಬೀಟೆ ತುಂಡುಗಳು 24=0.904 ಎಂ 3 ಹಾಗೂ ಸಾಗುವಾನಿ ತುಂಡುಗಳು 6=0.166 ಎಂ 3ನ್ನು ತರೀಕೆರೆ ವಲಯಕ್ಕೆ ಸೇರಿದ ಲಿಂಗದಹಳ್ಳಿಯಿಂದ ತರೀಕೆರೆಗೆ ಬರುವ ಗಾಳಿಹಳ್ಳಿ ಕ್ರಾಸ್

ಹತ್ತಿರ ಎರಡು ಜನ ಅಪರಾಧಿಗಳ ಸಮೇತ (ವಾಹನದ ಮಾಲೀಕ)ವಲಯ ಅರಣ್ಯಾಧಿಕಾರಿ, ತರೀಕೆರೆ ಮತ್ತು ಸಿಬ್ಬಂದಿಯವರು ವಶಪಡಿಸಿಕೊಂಡು ಅರಣ್ಯ ಮೊಕದ್ದಮೆ ಸಂಖ್ಯೆ: 17/96ನ್ನು ದಾಖಲು ಮಾಡಿರುತ್ತಾರೆ.

ಕರ್ನಾಟಕ ಅರಣ್ಯ ಕಾಯ್ದೆ ಕಲಂ 80ರ ಪ್ರಕಾರ ಯಾವುದೇ ಅರಣ್ಯ ಉತ್ಪನ್ನಗಳು ಯಾವುದೇ ಅರಣ್ಯ ಪ್ರಕರಣದಲ್ಲಿ ಪ್ರಾಥಮಿಕ ಹಂತದಲ್ಲಿ ಸರ್ಕಾರದ್ದೆಂದೇ ಭಾವಿಸಬೇಕಾಗಿದ್ದು, ಆಪಾದನೆ ಹೊರಿಸಲ್ಪಟ್ಟ ವ್ಯಕ್ತಿ ಅಮಾನತ್ತುಪಡಿಸಿಕೊಂಡ ಮರವು ತನಗೆ ಸೇರಿದೆ ಎಂಬುದನ್ನು ಪುರಾವೆ ಮಾಡುವ ಹೊಣೆಯನ್ನು ಹೊರಬೇಕಾಗಿರುತ್ತದೆ.

"When in any proceedings taken under this Act or in consequence of anything done under this Act or under any other law for the time being in force, a question arises as to whether any forest produce is the property of the State Government, such produce shall be presumed to be the property of the State Government until the contrary is proved, and in case of any prosecution the burden of proving the countrary shall lie on the accused."

104A. Restriction on trade and transport of black wood or Bite trees and timber therof. (1) No person other than-

a) the State Government; or
b) the officers of the State Government not below the rank of a Divisional Forest Officer, authorised in writing in this behalf.

Shall purchase of transport any blackwood or bite tree (Dalbergia Latifolia) or timber thereof:

2) No person shall sell or otherwise dispose of any such tree or timber to any person other than the State Government or the aforesaid officers.

8) Any person contravening the provisions of this section or any rule made thereunder shall, on conviction, be punishable with imprisonment for a term which may extend to [five years] and with fine which may extend to [ten thousand rupees.]

ಈ ಪ್ರಕರಣದಲ್ಲಿ ಅಪಹರಿಸಲ್ಪಟ್ಟ ವ್ಯಕ್ತಿಗಳು ಪ್ರಕರಣದಲ್ಲಿ ವಶಪಡಿಸಿಕೊಂಡ ವಸ್ತುಗಳು ನಮಗೆ ಸೇರಿದೆ ಎಂಬ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಹ ಹಾಜರುಪಡಿಸಿರುವುದಿಲ್ಲ. ಅದರಿಂದ ಪ್ರಕರಣದಲ್ಲಿ ವಶಪಡಿಸಿಕೊಂಡ ಬೀಟೆ ಮತ್ತು ಸಾಗುವಾನಿ ತುಂಡುಗಳು ಅರಣ್ಯ ಕಾಯ್ದೆ 80 ರಂತೆ ಸರ್ಕಾರಿ ಸ್ವತ್ತೆಂದು ರುಜುವಾತಾಗಿರುತ್ತದೆ.

**ಅಂಶ-5:**

ಅರ್ಜಿದಾರರಿಗೆ ಸೇರಿದ 407 ವ್ಯಾನು ನಂ: ಕೆ ಎ-05-9989 ರಲ್ಲಿ ಸರ್ಕಾರದ ಸ್ವತ್ತಾದ ಬೀಟೆ ತುಂಡುಗಳು 24=0.904 ಎಂ 3 ಸಾಗುವಾನಿ ತುಂಡುಗಳು 6=0.166 ಎಂ 3 ಅಕ್ರಮವಾಗಿ ಸಾಗಿಸಲು ಬಳಸಲಾಗಿದ್ದು, ವಾಹನದ ಮಾಲೀಕರು ಪ್ರತ್ಯಕ್ಷವಾಗಿ ಭಾಗಿಯಾಗಿದ್ದಾರೆಂಬುದು ಸಾಕ್ಷ್ಯಾಧಾರಗಳಿಂದ ರುಜುವಾತಾಗಿರುತ್ತದೆ. ಈ ಪ್ರಕರಣದ ಫಿರ್ಯಾದಿದಾರರು ಪ್ರಕರಣದ ಅರ್ಜಿದಾರ ಮತ್ತು ಆತನ ಸಹಚರರನ್ನು ಮಾಲು ಸಹಿತ ಬಂಧಿಸಿದ್ದು, ಅವುಗಳನ್ನು ಅಮಾನತ್ತುಪಡಿಸಿಕೊಂಡಿರುತ್ತಾರೆ. ಅವುಗಳ ಬಗ್ಗೆ ಸಮರ್ಪಕವಾದ ಸಾಕ್ಷ್ಯವನ್ನು ಅವರು ನೀಡಿರುತ್ತಾರೆ. ಸದರಿ ವಿಷಯವನ್ನು ಅರ್ಜಿದಾರರು ಅಲ್ಲಗಳೆದಿರುತ್ತಾರೆ. ಒಂದು ವೇಳೆ ಅವರ ಆರೋಪ ನಿಜವೆಂದು ಭಾವಿಸಬೇಕಾದಲ್ಲಿ ಅದಕ್ಕೆ ಸಮರ್ಪಕ ಸಾಕ್ಷ್ಯಾಧಾರಗಳನ್ನು ಒದಗಿಸುವ ಜವಾಬ್ದಾರಿ ಆರೋಪವನ್ನು ಎದುರಿಸುವ ಅರ್ಜಿದಾರನದಾಗಿದ್ದು, ಹಾಲಿ ಈ ಪ್ರಕರಣದಲ್ಲಿ ಅರ್ಜಿದಾರರು ತಾನು ಮಾಡದೇ ಇರುವ ಆಪಾದನೆಯನ್ನು ಪುರಾವೆ ಮಾಡುವಲ್ಲಿ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸಿದ ಕಾರಣ ಅರ್ಜಿದಾರರ ವಾಹನ ಅಕ್ರಮ ಮರಗಳ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಆದ್ದರಿಂದ ಪ್ರಕರಣದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ. ಆದ್ದರಿಂದ ಅಂಶ-5 ಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

ಈ ಮೇಲಿನ ಎಲ್ಲ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ವಾಹನದ ಮಾಲೀಕರು ಅರಣ್ಯ ಉತ್ಪನ್ನ ಕಳ್ಳಸಾಗಾಣಿಕೆಯಲ್ಲಿ ಭಾಗವಹಿಸಲು ವಾಹನವನ್ನು ಉಪಯೋಗಿಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೇ ಪ್ರಾಧಿಕಾರಕ್ಕೆ ಹಾಜರುಪಡಿಸಿದ ಪ್ರಕರಣದ ಮಹಜರ್ ನಿಶಾನೆ ಪಿ1 ರ ಪ್ರಕಾರ ಹಾಗೂ ಪ್ರಾಸಿಕ್ಯೂಶನ್ ಸಾಕ್ಷಿಗಳಾದ ಪಿ ಡಬ್ಲ್ಯೂ 1 ಮತ್ತು ಪಿಡಬ್ಲ್ಯೂ 2 ರವರು ಈ ಪ್ರಾಧಿಕಾರದಲ್ಲಿ ಸಾಕ್ಷಿ ನುಡಿದಂತೆ ಬೀಟೆ ತುಂಡುಗಳು 24=-.904 ಎಂ 3 ಸಾಗುವಾನಿ ತುಂಡುಗಳು 6=0.166 ಎಂ 3 ಸಾಗಿಸಲು ವಾಹನ ಬಳಸಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೇ ನನ್ನ ಮುಂದೆ ಹಾಜರುಪಡಿಸಿದ ದಾಖಲಾತಿಗಳು ಸಾಕ್ಷ್ಯಾಧಾರಗಳು ಮತ್ತು ವಾದ ವಿವಾದಗಳಿಂದ ವಾಹನ ಮಾಲೀಕರಾಗಲೀ ಇಲ್ಲವೇ ವಾಹನ ಉಸ್ತುವಾರಿದಾರರಾಗಲೀ ವಾಹನವು ಅರಣ್ಯ ಅಕ್ರಮ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೇ ಬದಲಾಗಿ ತಮಗೆ ಗೊತ್ತಿದ್ದೇ ಈ ಎಲ್ಲಾ ವ್ಯಕ್ತಿಗಳು ಈ ಲಾರಿಯಲ್ಲಿ ಅಕ್ರಮವಾಗಿ ಬೀಟೆ ಮತ್ತು ಸಾಗುವಾನಿ ತುಂಡುಗಳು (30=1.070 ಎಂ 3) ಅಕ್ರಮವಾಗಿ ಅರಣ್ಯ ಕಾಯ್ದೆ ಮತ್ತು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದ್ದಾರೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷ್ಯಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ನೋಂದಣಿ ಸಂಖ್ಯೆ ಕೆಎ-05-9989 ರ ಬಜಾಜ್ ಟೆಂಪೋ (ಇಂಜಿನ್ ನಂ:616969, 106270, ಚಾಸೀಸ್ ನಂ: 616 FD 739750 K 94) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 24=0.904 ಎಂ3 ಬೀಟೆ ತುಂಡುಗಳು ಹಾಗೂ 6=0.166 ಎಂ3 ಸಾಗುವಾನಿ ತುಂಡುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾಗಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 22.9.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

ಪಿ.ಆರ್. 1560 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ.

**PROCEEDINGS OF THE ASST. REGISTRAR OF CO-OPERATIVE SOCIETIES, II CIRCLE, CHAMARAJPET, BANGALORE-560 018**

**Sub:** Regarding sale confirmation of immovable property of Sri Mohameed Peer Residing at No. 15, Old No.U-57, 16th Cross, Padarayanapura, Bangalore - 26 Relating to C.E.P. No. ARBII(45)/CEP/2854/02-03 in favour of Sri Haji Mohameed Pasha S/o Shaik Ibhrahim residing at No.71, 'B' Street, Jagajeevan Ramnagara, Bangalore-18.

**Ref:** ARB II/CONFIRMATION/ 10 / dated 8.10.2004 and Sale proceedings date 26.8.2004 of the Sale officer of the Bangalore City Co-Operative Bank Ltd., Bangalore-18.

**Preamble:-**

Sri Mohameed Peer, residing at No.15, Old No.U-57, 16th Cross, Padarayanapura, Bangalore-560 026 have borrowed loan from the Bangalore City Co-Operative Bank Ltd., Head Office Branch, Pampa Mahakavi Road, Chamarajpet, Bangalore-18 by the Judgement debtor Sri Mohameed peer, have failed to repay the loan amount to the petitioner bank in time, consequent of which a decree bearing award No. JRB/DIS/5678/2000-2001, dated 6.6.2003 for Rs. 5,46,042/- as on 10.6.2001 plus further interest at the rate of 17% and over due interest at the rate of 2% and other cost obtained against Sri Mohameed Peer. In this connection execution petition was filed for execution of decree against the immovable property mortgaged by Sri Mohameed Peer, residing at No. 15, Old No.U-57, 16th Cross, Padarayanapura, Bangalore-26. Was brought for sale and public auction on 26.8.2004 by the sale officer Attached to the Bangalore City Co-operative Bank Ltd., Pampamahakavi road, Bangalore - 18 and immovable property was sold in public auction for Rs.8,00,000/- in favour of Sri Haji Mohameed Pasha S/o Shaik Ibhrahim, residing at No.17, 'B' Street, Jagjeevan Ramnagara, Bangalore-18. Since he was the highest bidder in the public auction conducted on 26.8.2004.

From the perusal of the records of the sale officer attached to the Bangalore City Co-Op. Bank Ltd., Pampamahakavi Road, Bangalore-18 submitted to this office, it is seen that the sale officer followed the sale procedure laid under rule 38 (2) (d) of Karnataka Co.op. societies rules 1960. In view of the proceedings of the sale officer after verifying and going through the records the following order is therefore passed.

**ORDER**

In exercise of Powers vested under rule 38 (6) (a) of the Karnataka Co op. Societies rules 1960 the sale of the mortgaged property bearing No.15, Old No.U-57, 16th Cross, Padarayanapura, Bangalore-26 by the Sale Officer attached to the Bangalore City Co-Op. Bank Ltd., Pampamahakavi Road, Bangalore - 18. In public auction conducted on 26.8.2004 of the property detailed in the schedule.

**SCHEDULE OF THE PROPERTY**

Property bearing No. 15, Old No.U-57, 16th Cross, Padarayanapura, Bangalore-26.

**BOUNDARIES**

| | | |
|---|---|---|
| East by | : | Road |
| West by | : | Other Property |
| North by | : | Muniswamy House |
| South by | : | Shamanna House |

In execution of C.E.P. No. ARB II (45)/CEP/2854/2002-2003 the above said property is therefore confirmed in favour of Haji Mohameed Pasha, s/o Shaik Ibhrahim, No.17, 'B' Street, Jagajeevan Ramnagara, Bangalore-18 for Rs.8,00,000/- (Rupees Eight Lakhs only) since he was the highest bidder in the auction sale conducted on 26.8.2004.

Given under my hand and seal on this 6.10.2004.

Assistant Registrar of Co-operative Societies, 2nd Circle,
Chamarajpet, Bangalore-560 018.

P.R. 1561

**PROCEEDINGS OF THE ASST. REGISTRAR OF CO-OPERATIVE SOCIETIES, II CIRCLE, CHAMARAJPET, BANGALORE-560 018**

**Sub:** Regarding sale confirmation of immovable property of Sri Shivananjappa Residing at No.40, 5th Main Road, 20th Cross, Bhuvaneshwari Nagar, Mariyappana Palya, Magadi Road, Bangalore- 560 023, Relating to C.E.P. No. ARBII(45)/CEP/153/1999-2000 in favour of Sri B.S. Manjunath, S/o B.R. Siddappa, residing at No.4/1, 5th Main, (Near 27th cross), Bhuvaneshwari Nagar, K.P. Agrahara, Bangalore-560 023.

**Ref:** ARB II/CONFIRMATION/ 8 / 2004-05 dated 1.10.2004 and Sale proceedings date 27.3.2004 of the Sale officer of the Bangalore City Co-Operative Bank Ltd., Bangalore-18.

**Preamble:-**

Sri Shivananjappa N., residing at No.40, 5th Main Road, 20th Cross, Bhuvaneshwari Nagar, Mariyappana Palya, Magadi Road, Bangalore-560 023 have borrowed loan from the Bangalore City Co-Operative Bank Ltd., Vijayanagara Branch and the Judgement debtor Sri Shivananjappa M. have failed to repay the loan amount to the petitioner bank in time, consequent of which a decree bearing award No. JRB/DIS/542/1998-99, dated 19.12.1998 for Rs. 3,18,185/- as on 18.11.1998 plus further interest at the rate of 18% and over due interest at the rate of 2% and other cost obtained against Sri Shivananjappa M. In this connection execution petition was filed for execution of decree against the immovable property mortgaged by Sri Shivananjappa, S/o Madaiah, residing at No. 40, 5th Main Road, 20th Cross, Bhuvaneshwari Nagar, Mariyappana Palya, Magadi Road, Bangalore-560023, brought for sale and public auction on 27.3.2004 by the sale officer of the Bangalore City Co-operative Bank Ltd., Pampamahakavi Road, Bangalore-18 and immovable property was sold in public auction for Rs.3,00,000/- in favour of Sri B.S. Manjunath, S/o R. Siddaiah, residing at No.4/1, 5th Main, Near 27th Cross, Bhuvaneshwari Nagar, K.P. Agrahara, Bangalore-560023, Since he was the highest bidder in the public auction conducted on 27.3.2004.

From the perusal of the records of the sale officer of the Bangalore City Co-Op. Bank Ltd., Pampamahakavi Road, Bangalore-18 submitted to this office, it is seen that the sale officer followed the sale procedure laid under rule 38 (2) (d) of Karnataka Co.op. Societies rules 1960. In view of the proceedings of the sale officer after verifying and going through the records the following order is therefore passed.

**ORDER**

In exercise of Powers vested under rule 38 (6) (a) of the Karnataka Co op. Societies rules 1960 the sale of the mortgaged property bearing No.40, 5th Main Road, 20th Cross, Bhuvaneshwari Nagar, Mariyappana Palya, Magadi Road, Bangalore-560023. By the Sale Officer of the Bangalore City Co-Op. Bank Ltd., Pampamahakavi Road, Bangalore - 18. In public auction conducted on 27.3.2004 of the property detailed in the schedule.

**SCHEDULE OF THE PROPERTY**

Property bearing No. 40, 5th Main Road, 20th Cross, Bhuvaneshwari Nagar, Mariyappana Palya, Magadi Road, Bangalore-560023.

**BOUNDARIES**

| | | |
|---|---|---|
| East by | : | Site No. 15 |
| West by | : | Site No. 12 |
| North by | : | Others Property |
| South by | : | Road |

In execution of C.E.P. No. ARB II (45)/CEP/1563/1999-2000 the above said property is therefore confirmed in favour of Sri B.S. Manjunath, S/o R. Siddaiah, residing at No.4/1, 5th Main Road, Near 27th Cross, Bhuvaneshwari Nagar, K.P. Agrahara, Bangalore-560 023 for Rs.3,00,000/- (Rupees Three Lakhs only) since he was the highest bidder in the auction sale conducted on 27.3.2004.

Given under my hand and seal on this 1st October, 2004.

Assistant Registrar of Co-operative Societies, 2nd Circle,
Chamarajpet, Bangalore-560 018.

P.R. 1562

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂ: ಕಾನಪ:ಪ್ರ:F-CR/20/2004, ದಿನಾಂಕ: 5ನೇ ನವೆಂಬರ್ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ತಿಪ್ಪಮ್ಮ ಬಬ್ಬೂರು | | 1. ಶ್ರೀಮತಿ ಪರ್ವತವಳ್ಳಿ ವಾಹನ ಮಾಲೀಕರು, ಕೃಷ್ಣಾಂಬುಧಿ ಗ್ರಾಮ ವಾಣಿ ಶುಗರ್ ಪೋಸ್ಟ್. |
| | | 2. ನ್ಯಾಷನಲ್ ಇನ್ ಕಂ.ಲಿ., ದಾವಣಗೆರೆ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ತಿಪ್ಪಮ್ಮ ಇವರು ತಾವು ಮೃತ ಗೋವರ್ಧನ ಇವರ ಹೆಂಡತಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗೋವರ್ಧನ ಇವರು ಒಂದನೇ ಪ್ರತಿವಾದಿಗಳಾದ ಪರ್ವತವಳ್ಳಿ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ

ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**

ಪಿ.ಆರ್. 1563 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## PROCEEDINGS OF THE REGISTERING AUTHORITY AND REGIONAL TRANSPORT OFFICER:INDIRANAGAR:BANGALORE(EAST):BANGALORE-38

**Present:** Afzal Ahmed Khan,
Regional Transport Officer & Registering Authority, Indiranagar, Bangalore (East).

**Sub:** Cancellation of registration certificate in respect of MYT-5984 (GV) Vehicle-Reg.

**Ref:** Application dated 19-10-2004 from A. Srinivasa Reddy S/o B. Annaiah Reddy, No. 206, Kodihalli, B'lore-75.

**Preamble:-**

The registered owner of M.V. bearing registration No. MYT-5984 (GV) Sri A. Srinivasa Reddy S/o B. Annaiah Reddy, No. 206, Kodihalli, B'lore-75 has surrendered the vehicle documents in this office on 19.10.2004, requesting to cancellation of registration certificate of M.V. MYT-5984 [GV], was registered on 14.5.1981 and the tax paid upto 31.10.2004, as per the request of the applicant the MV is in scarping condition, therefore he requested for cancellation of registration and registration certificate.

In view of the above facts I pass the following:-

**ORDER No. RTO.BNG.E.RGN/TR.PR /MYT-5984/04-05, Dated: 19th October 2004**

In exercise of the powers vested under Sec.55(1) of the Motor Vehicle Act. 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of bearing MV No. MYT-5984[GV] subject to condition that he shall pay arrears of tax and disposal of DSA cases if any detected in later.

| | | |
|---|---|---|
| 1. | M.V. No. | MYT-5984 |
| 2. | Class of Vehicle | GV |
| 3. | Type of Body | OPEN |
| 4. | Chassis No. | 344073730415 |
| 5. | Engine No. | 692D01732072 |
| 6. | Year of Manufacture | 1981 |
| 7. | Year of Registration | 14-5-1981 |

**AFZAL AHMED KHAN**

P.R. 1564 Regional Transport Officer & Registering Authority, Indiranagar, Bangalore (East)

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ತುಮಕೂರು

**ಪ್ರಕಟಣೆ ಸಂ:ಬಿಸಿಎಂ-2:ಮ:ಕಾತ:ಸಿಆರ್-19:2004-05, ದಿನಾಂಕ: 20ನೇ ಅಕ್ಟೋಬರ್ 2004**

**ವಿಷಯ:** 2004-05ನೇ ಸಾಲಿಗೆ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

**ಉಲ್ಲೇಖ:** ಈ ಕಛೇರಿಯ ಸಮಸಂಖ್ಯೆಯ ಪ್ರಕಟಣೆ ದಿ: 16.7.2004.

ತುಮಕೂರು ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ 2004-05ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ:30.11.2004.

**ನಿಬಂಧನೆಗಳು**

1. ಕಾನೂನು ಪದವಿ ಪರೀಕ್ಷೆ ಪಾಸು ಮಾಡಿದ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಯಾಗಿರಬೇಕು (ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧರು, ಜೈನರು, ಪಾರ್ಸಿ, ಸಿಖ್) ವಕೀಲ ವೃತ್ತಿ ಅಭ್ಯಾಸಕ್ಕೆ ನಿಗದಿಪಡಿಸಿದ ವಿದ್ಯಾರ್ಹತೆ ಹೊಂದಿರಬೇಕು.
2. ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವುದು ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗಿರಬೇಕು.
3. ಸರ್ಕಾರ ನಿಗದಿಪಡಿಸಿರುವ ನಮೂನೆಯಲ್ಲಿ ಜಾತಿ ಆದಾಯ ದೃಢೀಕರಣ ಪತ್ರ ಸಲ್ಲಿಸಬೇಕು. ವಾರ್ಷಿಕ ಆದಾಯದ ಮಿತಿ ಎಲ್ಲಾ ಮೂಲಗಳಿಂದ ರೂ. 15,000 ಗಳನ್ನು ಮೀರಬಾರದು. ಪ್ರವರ್ಗ 1 ರಡಿಯಲ್ಲಿ ಬರುವ ಮತೀಯ ಅಲ್ಪಸಂಖ್ಯಾತರಿಗೆ ಆದಾಯದ ಮಿತಿ ಇರುವುದಿಲ್ಲ.
4. ತರಬೇತಿ ಅವಧಿ 4 ವರ್ಷಗಳಾಗಿದ್ದು ಮಾಹೆಯಾನ ರೂ. 1000 ರಂತೆ ತರಬೇತಿ ಭತ್ಯೆ ನೀಡಲಾಗುವುದು.
5. ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷ ಮೀರಿರಬಾರದು.
6. ಅಭ್ಯರ್ಥಿಯು ಬಾರ್ ಕೌನ್ಸಿಲ್ ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಛೇರಿ, ತುಮಕೂರುರವರಿಗೆ ಸಲ್ಲಿಸತಕ್ಕದ್ದು. ಕೊನೆಯ ದಿನಾಂಕ ಮೀರಿದ ನಂತರ ಬಂದ ಹಾಗೂ ಅಪೂರ್ಣವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಪಿ.ಆರ್. 1565 ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಗಳು**

**ನಂ.ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್-6/2004-05, ದಿನಾಂಕ: 2ನೇ ನವೆಂಬರ್ 2004**

**ವಿಷಯ:** ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕರಿಕೆರೆ, ತಿಪಟೂರು ತಾಲ್ಲೂಕು ಈ ಸಂಘವು ಕಾರ್ಯಚಟುವಟಿಕೆಗಳನ್ನು ನಡೆಸದೆ ಸ್ಥಗಿತಗೊಂಡಿರುವುದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನು ನೇಮಿಸುವ ಕುರಿತು.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಪತ್ರ ಸಂಖ್ಯೆ ಸನಿ-34/ ಎಲ್‌ಕ್ಯೂಡಿ/14/2004-05 ದಿನಾಂಕ: 29.5.2004.

**ಪ್ರಸ್ತಾವನೆ:**

ಮೇಲ್ಕಂಡ ಸಂಘವು ನೊಂದಣಿ ಸಂಖ್ಯೆ/ಡಿಆರ್‌ಟಿ/13049/90-91 ದಿನಾಂಕ:5.11.1990 ರಂದು ನೊಂದಣಿಯಾಗಿರುತ್ತದೆ. ಹಾಗೂ ಈ ಸಂಘದ 2003-04 ರಿಂದ 2007-08ನೇ ಸಾಲಿನ ಚುನಾವಣೆ ನಡೆದು ಸಂಘದ ಅಧ್ಯಕ್ಷರ ಆಯ್ಕೆ ಸಂದರ್ಭದಲ್ಲಿ 4 ಜನ ನಿರ್ದೇಶಕರುಗಳು ನಿರ್ದೇಶಕರ ಸ್ಥಾನಕ್ಕೆ ರಾಜೀನಾಮೆ ನೀಡಿರುವುದರಿಂದ ಸಂಘಧ ಕಾರ್ಯಕಾರಿ ಮಂಡಳಿ ರಚನೆಗೆ ಕೋರಂ ಇಲ್ಲದ ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1) ರಲ್ಲಿ ದಿ:5.1.2004 ರಂದು ವಿಶೇಷಾಧಿಕಾರಿಯನ್ನು ನೇಮಕ ಮಾಡಿದ್ದು ಹಾಗೂ ಸಂಘಕ್ಕೆ ಐದು ತಿಂಗಳಿಗೂ ಮೇಲ್ಪಟ್ಟು ಸಂಘಕ್ಕೆ ಹಾಲು ಸರಬರಾಜು ಇಲ್ಲದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದಲೂ ಮತ್ತು ಸಂಘದ ವಿಶೇಷಾಧಿಕಾರಿಗಳು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಆಡಳಿತ ಮಂಡಳಿ ರಚನೆ ಮಾಡಲು ಸಾಧ್ಯವಾಗದೆ ಇರುವುದರಿಂದಲೂ ಹಾಗೂ ಸಂಘದ ವಿಶೇಷಾಧಿಕಾರಿಗಳ ಅವಧಿಯು ದಿನಾಂಕ:4.6.2004ಕ್ಕೆ 6 ತಿಂಗಳ ಅವಧಿಯು ಮುಗಿದಿರುವುದರಿಂದಲೂ, ಸಂಘವನ್ನು ಸಮಾಪನೆಗೊಳಿಸಲು ಹಾಗೂ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರು ಕೋರಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಟಿ.ವಿ. ನರಸಿಂಹಮೂರ್ತಿ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕರಿಕೆರೆ, ತಿಪಟೂರು ತಾಲ್ಲೂಕು, ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2) (ಬಿ)(ಸಿ) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ/ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21.11.2001 ರ ಪ್ರಕಾರ ಸಮಾಪನೆಗೊಳಿಸಿರುತ್ತೇನೆ. ಮತ್ತು ಸಹಕಾರ ಸಂಘಗಳ ಕಾಯಿದೆ 1959ರ ಕಲಂ 73ರ ಪ್ರಕಾರ ಸಂಘದ ವ್ಯಾಪ್ತಿಯ ಹಾಲು ವಿಸ್ತರಣಾಧಿಕಾರಿಯನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಂಘದ ಸಮಾಪನಾಧಿಕಾರಿಯು ಈ ಸಂಘದ ವಿಶಿಷ್ಟ ಪ್ರಭಾರವನ್ನು ಪಡೆದುಕೊಂಡು 6 ತಿಂಗಳೊಳಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 74 ಮತ್ತು ಕರ್ನಾಟಕ ಸಹಕಾರ ಸಂಘಗಳ 1960ರ ನಿಯಮ 33ರ ಪ್ರಕಾರ ಕರ್ತವ್ಯ ನಿರ್ವಹಿಸಿ ಈ ಸಂಘದ ಆಸ್ತಿ-ಜವಾಬ್ದಾರಿಯನ್ನು ವಿಲೇವಾರಿ ಮಾಡಿ ಸಂಘದ ಋಣ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸತಕ್ಕದ್ದು.

ದಿನಾಂಕ:2.11.2004 ರಂದು ಈ ಕಛೇರಿಯ ಮೊಹರಿನೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಪಿ.ಆರ್. 1566 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಅಧಿಸೂಚನೆ ಸಂಖ್ಯೆ: ಸಿಆಸು 181 ಸಅಸೇ 2004(ಭಾಗ), ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2004**

ಅಧಿಸೂಚನೆ ಸಂಖ್ಯೆ: ಸಿಆಸುಇ 32 ಸಅಸೇ 2003 ದಿನಾಂಕ: 10.6.2004ರ "ಆಪ್ತಕಾರ್ಯದರ್ಶಿ ಗ್ರೇಡ್-2 ವೃಂದಕ್ಕೆ ಬಡ್ತಿ ನೀಡಿ ನೇಮಿಸಲಾದ ಹುದ್ದೆ" ಕಾಲಂ ಕೆಳಗೆ ಕ್ರಮ ಸಂಖ್ಯೆ: 1,3,5,6,8,9,10,13,14 ರಲ್ಲಿರುವ ಅಧಿಕಾರಿಗಳ ಹೆಸರಿನ ಮುಂದೆ "ಆಪ್ತ ಕಾರ್ಯದರ್ಶಿ" ಎಂಬ ಪದಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಇದೇ ಕ್ರಮ ಸಂಖ್ಯೆಯ ದಿನಾಂಕ: 27.9.2004ರ "ಆಪ್ತಕಾರ್ಯದರ್ಶಿ ಗ್ರೇಡ್-2 ವೃಂದಕ್ಕೆ ಬಡ್ತಿ ನೀಡಿ ನೇಮಿಸಲಾದ ಹುದ್ದೆ" ಕಾಲಂ ಕೆಳಗೆ ಕ್ರಮ ಸಂಖ್ಯೆ: 1,2,3,4,5,8,9,10,11, ರಲ್ಲಿರುವ ಅಧಿಕಾರಿಗಳ ಹೆಸರಿನ ಮುಂದೆ "ಆಪ್ತ ಕಾರ್ಯದರ್ಶಿ" ಎಂಬ ಪದಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು. ಹಾಗೂ ಸದರಿ ಅಧಿಸೂಚನೆ ಭಾಗ-1 ರಲ್ಲಿ 4ನೇ ಸಾಲಿನಲ್ಲಿರುವ "ದರ್ಜೆ-2" ಎಂಬ ಪದಗಳನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.

**ಯು.ಪಿ. ಪ್ರಭು**

ಪಿ.ಆರ್. 1567 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಕಂದಾಯ ಇಲಾಖೆ**

**ಅಧಿಸೂಚನೆ ಸಂಖ್ಯೆ: ಕಂ.ಇ. 496 ಮುನೋಮು 2004, ಬೆಂಗಳೂರು, ದಿನಾಂಕ: 3ನೇ ನವೆಂಬರ್ 2004**

ನೊಂದಣಿ ಮತ್ತು ಮುದ್ರಾಂಕ ಕಾಯ್ದೆ 1957ರ (1957ರ ಕರ್ನಾಟಕ ಕಾಯ್ದೆ-34) ಕಲಂ 9(1)ಬಿ ರೊಂದಿಗೆ, ಕರ್ನಾಟಕ ಮುದ್ರಾಂಕ ನಿಯಮಗಳು 1958ರ ನಿಯಮ 11-ಎ (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೆ: RITZEL INDIA PRIVATE LIMITED ಇವರು ಒಟ್ಟು 83,05,500/- ರೂಪಾಯಿಗಳ ಮೌಲ್ಯದ ಷೇರುಗಳನ್ನು equity share ವಿತರಿಸಲು ತಗಲುವ ಮುದ್ರಾಂಕ ಶುಲ್ಕವನ್ನು ದಿನಾಂಕ:28.9.2004 ರಂದು ಒಟ್ಟು 8,306/- (ಎಂಟು ಸಾವಿರದ ಮೂರು ನೂರ ಆರು ರೂಪಾಯಿಗಳು ಮಾತ್ರ) ರೂಪಾಯಿಗಳನ್ನು ಸಂದಾಯಿಸಿರುತ್ತಾರೆಂದು ಕರ್ನಾಟಕ ಸರ್ಕಾರವು ಪ್ರಕಟಿಸುತ್ತದೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: 496 ಮುನೋಮು 2004, ದಿನಾಂಕ: 3.11.2004ರ ಪ್ರಕಾರ ಸಂಚಿತ ಮುದ್ರಾಂಕ ಶುಲ್ಕವನ್ನು ಮೊದಲ ಬಾರಿಗೆ ಸಂದಾಯಿಸಲಾಗಿದೆ. ಎಂಬ ಪದಗಳನ್ನು ಷೇರು ಪತ್ರಗಳ ಮೇಲೆ ಮುದ್ರಿಸಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ಮುದ್ರಾಂಕ ನಿಯಮಾವಳಿಗಳ ನಿಯಮ 11-ಎ (3)ರ ಪ್ರಕಾರ ಸದರಿ ಸಂಸ್ಥೆಯು ವರ್ಗಾಯಿಸಿದ ನಿರ್ದಿಷ್ಟ ಸಂಖ್ಯೆಯ equity ಷೇರುಗಳ ವರದಿಯನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು ಹಾಗೂ ಕರ್ನಾಟಕ ಮುದ್ರಾಂಕ ನಿಯಮಾವಳಿಯಲ್ಲಿನ ನಿಯಮ 11-ಎ(4)ರ ಪ್ರಕಾರ ಸರ್ಕಾರದ ಸಂಬಂಧಪಟ್ಟ ಅಧಿಕಾರಿಗಳು equity ಷೇರುಗಳ ವಿತರಣೆಗೆ ಸಂಬಂಧಿಸಿದಂತೆ ನಿರ್ವಹಿಸಲಾದ ರಿಜಿಸ್ಟರ್ ಪುಸ್ತಕ, ದಾಖಲೆಗಳನ್ನು ಪರಿಶೀಲಿಸಲು ಮತ್ತು ತಪಾಸಣೆ ನಡೆಸಲು ಸದರಿ ಸಂಸ್ಥೆಯು ಅವಕಾಶ ನೀಡತಕ್ಕದ್ದು.

**ಡಿ.ಎನ್. ಶ್ರೀಮುಖಿ**

ಪಿ.ಆರ್. 1568 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ಕರ್ನಾಟಕ ನೀರಾವರಿ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನೀಯರ್‌ವರ ಕಛೇರಿ, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ನವಿಲುತೀರ್ಥ**

**ಅಧಿಸೂಚನೆ ನಂ:ಕಾಮಯಾಂವಿ:ಸಿ-1:ಕರ್ನಾಟಕ ಮಾಹಿತಿ ಪಡೆಯಲು ಹಕ್ಕು:2004-05**

**ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ 3ನೇ ಪ್ರಕರಣದ (ಬಿ) ಖಂಡದಡಿಯಲ್ಲಿ ಕಾರ್ಯಪಾಲಕ ಅಭಿಯಂತರು, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥ ಕಛೇರಿಯ ವಿವರಗಳ ಪ್ರಕಟಣೆ:**

**1) ರಚನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:-**

ಕಾರ್ಯಪಾಲಕ ಅಭಿಯಂತರು ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥ ಕಛೇರಿಯ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ನವಿಲುತೀರ್ಥದಲ್ಲಿ ಕೆಲಸ ನಿರ್ವಹಿಸುತ್ತಲಿದೆ. ಶ್ರೀ ವಿ.ಮ. ಬೆಲ್ಲದ, ಕಾರ್ಯಪಾಲಕ ಅಭಿಯಂತರರು ಈ ಕಛೇರಿಯ ಪ್ರಭಾರವನ್ನು ಹೊಂದಿರುವರು. ಗುತ್ತಿಗೆ ಆಧಾರದ ಮೇಲೆ 3 ಜನ ಸಹಾಯಕ ಅಭಿಯಂತರರು, ಕಿರಿಯ ಅಭಿಯಂತರವರ ಮಂಜೂರಾದ ಹುದ್ದೆಗಳಲ್ಲಿ ಇಬ್ಬರು ಕಿರಿಯ ಅಭಿಯಂತರವರು, ಕಾರ್ಯವ್ಯವಸ್ಥೆಯ ಮೇಲೆ ತಾತ್ಕಾಲಿಕವಾಗಿ ಕೆಲಸ ನಿರ್ವಹಿಸುತ್ತಿರುವ ಓರ್ವ ಕಿರಿಯ ಅಭಿಯಂತರವರು, ಓರ್ವ ಕಛೇರಿ ಅಧೀಕ್ಷಕರು, ಓರ್ವ ಲೆಕ್ಕ ಅಧೀಕ್ಷಕರು, ಓರ್ವ ಪ್ರಥಮ ದರ್ಜೆ ಉಗ್ರಾಣ ಪಾಲಕರು ಹಾಗೂ 'ಸಿ' ಮತ್ತು 'ಡಿ' ವರ್ಗದ ನೌಕರರು ಈ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

2) ಕಛೇರಿಯ ಪ್ರಕಾರ್ಯಗಳು ಈ ಕೆಳಗಿನಂತಿವೆ:-

**ಅ) ಕಾರ್ಯಪಾಲಕ ಅಭಿಯಂತರು ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥ ಕಛೇರಿಯ ಅಡಿಯಲ್ಲಿ ಈ ಕೆಳಗೆ ನಮೂದಿಸಿದ ಉಪವಿಭಾಗಗಳು ಕೆಲಸ ನಿರ್ವಹಿಸುತ್ತಿವೆ.**

1) ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥ.
2) ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಹಿಡಕಲ್ ಡ್ಯಾಮ್.
3) ಸಹಾಯಕ ಕಾರ್ಯಪಾಲಕ ಅಭಿಯಂತರರು, ವಿದ್ಯುತ್ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಸವದತ್ತಿ.
4) ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನರಗುಂದ.
5) ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬಿಜಾಪುರ.

**ಆ) ಈ ಕೆಳಕಂಡ ವಿಷಯಗಳು ಕಾರ್ಯಪಾಲಕ ಅಭಿಯಂತರರು, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥದ ಕಾರ್ಯವ್ಯಾಪ್ತಿಯಲ್ಲಿ ಬರುತ್ತವೆ.**

ಈ ವಿಭಾಗದಡಿಯಲ್ಲಿ ನೀರಾವರಿ(ಉತ್ತರ) ವಲಯಕ್ಕೆ ಸಂಬಂಧಿಸಿದಂತೆ ಹಾಗೂ ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಸಂಬಂಧಿಸಿದ ಎಲ್ಲಾ ವಾಹನ:ಯಂತ್ರೋಪಕರಣಗಳ ದುರಸ್ತಿ ಕೆಲಸಗಳನ್ನು ಕೈಗೊಳ್ಳಲಾಗುತ್ತಿದೆ. ಹಾಗೂ ಎಲ್ಲಾ ಅನುಪಯುಕ್ತ ವಾಹನ: ಯಂತ್ರೋಪಕರಣಗಳನ್ನು ಪರಿವೀಕ್ಷಣೆ ಮಾಡಿ ರದ್ದಿ ಬೆಲೆ ನಿಗದಿಪಡಿಸಿ ಮೆ: ಎಂ.ಎಸ್.ಟಿ.ಸಿ. ಬೆಂಗಳೂರು ಇವರ ಸಹಯೋಗದೊಂದಿಗೆ ಬಹಿರಂಗ ಹರಾಜು ಮಾಡಿ ವಿಲೇವಾರಿ ಮಾಡಲಾಗುತ್ತಿದೆ. ನೀರಾವರಿ(ಉತ್ತರ) ವಲಯಕ್ಕೆ ಸಂಬಂಧಿಸಿದ ಎಲ್ಲಾ ಯಾತ ನೀರಾವರಿ ಯೋಜನೆಗಳ ನೀರೆತ್ತುವ ಯಂತ್ರಾಗಾರಗಳ ಪಂಪಿಂಗ್ ಯಂತ್ರಗಳ ನಿರ್ವಹಣೆಯನ್ನು ಮಾಡಲಾಗುತ್ತಿದೆ. ಈ ವಿಭಾಗದಡಿಯಲ್ಲಿ 5 ಉಪವಿಭಾಗಗಳು ಕೆಲಸ ನಿರ್ವಹಿಸುತ್ತಲಿವೆ.

**1) ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ ನವಿಲುತೀರ್ಥ:-** ಈ ಉಪವಿಭಾಗದಡಿಯಲ್ಲಿ ಮಲಪ್ರಭಾ ಎಡದಂಡೆ ಕಾಲುವೆ ನಿರ್ಮಾಣ ವೃತ್ತ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥಕ್ಕೆ ಸಂಬಂಧಿಸಿದ ವಾಹನ:ಯಂತ್ರೋಪಕರಣಗಳ ದುರಸ್ತಿ, ಅನುಪಯುಕ್ತ ವಾಹನ, ಯಂತ್ರೋಪಕರಣಗಳನ್ನು ರದ್ದಿಗೊಳಿಸಿ (ಸ್ಕ್ರ್ಯಾಪ್‌ಮಾಡಿ) ವಿಲೇವಾರಿ ಮಾಡಲಾಗುವ ಪ್ರಕ್ರಿಯೆಗಳನ್ನು, ಕಾಲುವೆ ಗೇಟುಗಳ ದುರಸ್ತಿ ಕೆಲಸಗಳನ್ನು ಹಾಗೂ ಒಂದು ಯಾತ ನೀರಾವರಿ ಯೋಜನೆಯ ನೀರೆತ್ತುವ ಯಂತ್ರಾಗಾರಗಳ ಪಂಪಿಂಗ್ ಯಂತ್ರಗಳ ನಿರ್ವಹಣೆಯನ್ನು ಮಾಡಲಾಗುತ್ತಿದೆ.

**2) ವಿದ್ಯುತ್ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಸವದತ್ತಿ:-** ಉಪವಿಭಾಗದಡಿಯಲ್ಲಿ ಮಲಪ್ರಭಾ ಯೋಜನೆಯಡಿಯಲ್ಲಿ ಬರುವ 11 ಯಾತ ನೀರಾವರಿ ಯೋಜನೆಗಳ ನೀರೆತ್ತುವ ಯಂತ್ರಾಗಾರಗಳ ಪಂಪಿಂಗ್ ಯಂತ್ರಗಳ ನಿರ್ವಹಣೆ ಮಾಡಲಾಗುತ್ತಿದೆ. ಹಾಗೂ ಈಗ ಹೊಸದಾಗಿ ದೇವಲಾಪೂರ ಯಾತ ನೀರಾವರಿ ಯೋಜನೆಗೆ ಪಂಪಿಂಗ್ ಯಂತ್ರಗಳನ್ನು ಅಳವಡಿಸುವ ಕಾರ್ಯ, 33 ಕೆ.ವಿ.ಎ. ವಿದ್ಯುತ್ ಮಾರ್ಗ ನಿರ್ಮಾಣ ಕೆಲಸವನ್ನು ಮಾಡಲಾಗುತ್ತಿದೆ.

**3) ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ನರಗುಂದ:-** ಈ ಉಪವಿಭಾಗದಡಿಯಲ್ಲಿ ಮಲಪ್ರಭಾ ಬಲದಂಡೆ ಕಾಲುವೆ ನಿರ್ಮಾಣ ವೃತ್ತ ಕರ್ನಾಟಕ ನೀರಾವರಿ ನಿಗಮ ನಿಯಮಿತ, ಧಾರವಾಡಕ್ಕೆ ಸಂಬಂಧಿಸಿದ ವಾಹನ:ಯಂತ್ರೋಪಕರಣಗಳ ದುರಸ್ತಿ, ಅನುಪಯುಕ್ತ ವಾಹನ:ಯಂತ್ರೋಪಕರಣಗಳ ದುರಸ್ತಿ, ಅನುಪಯುಕ್ತ ವಾಹನ:ಯಂತ್ರೋಪಕರಣಗಳನ್ನು ರದ್ದಿಗೊಳಿಸಿ ವಿಲೇವಾರಿ ಮಾಡುವ ಪ್ರಕ್ರಿಯೆಗಳನ್ನು ಕಾಲುವೆ ಗೇಟುಗಳ ದುರಸ್ತಿ ಕೆಲಸಗಳನ್ನು ಹಾಗೂ 3 ಯಾತ ನೀರಾವರಿ ಯೋಜನೆಯ ನೀರೆತ್ತುವ ಯಂತ್ರಾಗಾರಗಳ ಪಂಪಿಂಗ್ ಯಂತ್ರಗಳ ನಿರ್ವಹಣೆಯನ್ನು ಮಾಡಲಾಗುತ್ತಿದೆ.

**4) ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಹಿಡಕಲ್ ಡ್ಯಾಮ್:-** ಈ ಉಪವಿಭಾಗದಡಿಯಲ್ಲಿ ಘಟಪ್ರಭಾ ಬಲದಂಡೆ ಕಾಲುವೆ ನಿರ್ಮಾಣ ವೃತ್ತ, ಹಿಡಕಲ್ ಡ್ಯಾಮ್‌ಗೆ ಸಂಬಂಧಿಸಿದ ವಾಹನ:ಯಂತ್ರೋಪಕರಣಗಳ ದುರಸ್ತಿ, ಅನುಪಯುಕ್ತ ವಾಹನ:ಯಂತ್ರೋಪಕರಣಗಳ ದುರಸ್ತಿ, ಅನುಪಯುಕ್ತ ವಾಹನ:ಯಂತ್ರೋಪಕರಣಗಳನ್ನು ರದ್ದಿಗೊಳಿಸಿ ವಿಲೇವಾರಿ ಮಾಡುವ ಪ್ರಕ್ರಿಯೆಗಳನ್ನು, ಕಾಲುವೆ ಗೇಟುಗಳ ದುರಸ್ತಿ ಕೆಲಸಗಳನ್ನು ಹಾಗೂ 4 ಯಾತ ನೀರಾವರಿ ಯೋಜನೆಯ ನೀರೆತ್ತುವ ಯಂತ್ರಾಗಾರಗಳ ಪಂಪಿಂಗ್ ಯಂತ್ರಗಳ ನಿರ್ವಹಣೆಯನ್ನು ಮಾಡಲಾಗುತ್ತಿದೆ.

**5) ಕಾರ್ಯಾಗಾರ ಮತ್ತು ಯಾಂತ್ರಿಕ ಉಪವಿಭಾಗ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬಿಜಾಪೂರ:-** ಈ ಉಪವಿಭಾಗ ದಡಿಯಲ್ಲಿ ಘಟಪ್ರಭಾ ಎಡದಂಡೆ ಕಾಲುವೆ ನಿರ್ಮಾಣ ವೃತ್ತ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬಿಜಾಪೂರಕ್ಕೆ ಸಂಬಂಧಿಸಿದ ವಾಹನ:ಯಂತ್ರೋಪಕರಣಗಳ ದುರಸ್ತಿ ಅನುಪಯುಕ್ತ ವಾಹನ:ಯಂತ್ರೋಪಕರಣಗಳನ್ನು ರದ್ದಿಗೊಳಿಸಿ ವಿಲೇವಾರಿ ಮಾಡುವ ಪ್ರಕ್ರಿಯೆಗಳನ್ನು, ಕಾಲುವೆಗೇಟುಗಳ ದುರಸ್ತಿ ಕೆಲಸಗಳನ್ನು 3 ಯಾತ ನೀರಾವರಿ ಯೋಜನೆಯ ನೀರೆತ್ತುವ ಯಂತ್ರಾಗಾರಗಳ ನಿರ್ವಹಣೆಯನ್ನು ಮಾಡಲಾಗುತ್ತಿದೆ.

ಈ ವಿಭಾಗ ಕಛೇರಿಯು ಕಾಮಗಾರಿಗಳು ಹಾಗೂ ವಾಹನಗಳ ಬಿಡಿಭಾಗಗಳ ಸರಬರಾಜುದಾರರ ಬಿಲ್ಲುಗಳನ್ನು ಪರಿಶೀಲಿಸಿ ಪಾಸುಮಾಡಿ ಅವರಿಗೆ ಚೆಕ್‌ಗಳನ್ನು ವಿತರಿಸುವ, ಉಗ್ರಾಣಶಾಖೆಗೆ ಸಂಬಂಧಿಸಿದ ಬಿಲ್ಲುಗಳನ್ನು ಪಾವತಿಸುವ, ಆಯವ್ಯಯ, ಸಾರ್ವಜನಿಕ ಲೆಕ್ಕ ಪತ್ರ ಸಮಿತಿ ಹಾಗೂ ಮಹಾಲೇಖಪಾಲರ ಲೆಕ್ಕಪತ್ರ ತಪಾಸಣೆಯ ಆಕ್ಷೇಪಣೆಗಳಿಗೆ ಉತ್ತರ ಸಲ್ಲಿಸುವ, ವಿಷಯ ಸಮಿತಿ ಅಂದಾಜು ಸಮಿತಿಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ಮೇಲಾಧಿಕಾರಿಗಳವರಿಗೆ ಸಲ್ಲಿಸುವ, ವಿಭಾಗ ಮತ್ತು ಉಪವಿಭಾಗಗಳ ಸಿಬ್ಬಂದಿಗಳ ವೇತನಕ್ಕೆ ಸಂಬಂಧಿಸಿದ ಖಜಾನೆ ಸ್ವರೂಪದ ಕೆಲಸಗಳು ಇತ್ಯಾದಿ ಹಣಕಾಸಿನ ಕೆಲಸಗಳನ್ನು ಲೆಕ್ಕಶಾಖೆಯಲ್ಲಿ ನಿರ್ವಹಿಸಲಾಗುತ್ತಿದೆ.

ಈ ವಿಭಾಗ ಕಛೇರಿಯು ಈ ಕಚೇರಿ ಹಾಗೂ ಅಧೀನದ ಉಪವಿಭಾಗಗಳ ಅಧಿಕಾರಿಗಳ, ಸಹಾಯಕ ಅಭಿಯಂತರರು, ಕಿರಿಯ ಅಭಿಯಂತರರು ಮತ್ತು ಇತರ ತಾಂತ್ರಿಕ ವರ್ಗದ ನೌಕರರು 'ಸಿ' ಮತ್ತು 'ಡಿ' ವರ್ಗದ ಎಲ್ಲ ನೌಕರರ ಸೇವಾ ವಿಷಯಗಳು ಇತ್ಯಾದಿ ಕೆಲಸಗಳನ್ನು ಆಡಳಿತ ಶಾಖೆಯಲ್ಲಿ ನಿರ್ವಹಿಸಲಾಗುತ್ತಿದೆ.

**೩) ಈ ಕಛೇರಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿ:ಶಾಖಾ ಮುಖ್ಯಸ್ಥರುಗಳವರ ವಿವರಗಳು ಈ ಕೆಳಗೆ ವಿವರಿಸಿದಂತೆ ಇರುತ್ತವೆ.**

| ಅ.ನಂ. | ಅಧಿಕಾರಿ:ಶಾಖಾಮುಖ್ಯಸ್ಥ ಸಿಬ್ಬಂದಿಗಳವರ ಹೆಸರು ಮತ್ತು ಪದನಾಮ | ನಿರ್ವಹಿಸುತ್ತಿರುವ ಕರ್ತವ್ಯ ವಿಷಯಗಳು |
|---|---|---|
| 1) | ಶ್ರೀ ವಿ.ಮ.ಬೆಲ್ಲದ, ಕಾರ್ಯಪಾಲಕ ಅಭಿಯಂತರರು. | ಈ ವಿಭಾಗದ ಎಲ್ಲ ವಿಷಯಗಳ ಪ್ರಭಾರ. |
| 2) | ಶ್ರೀ ಕೆ. ಶ್ರೀಪಾದರಾವ, ಕಿರಿಯ ಅಭಿಯಂತರರು. | ಈ ವಿಭಾಗದ ತಾಂತ್ರಿಕ ಕೆಲಸಗಳ ಮೇಲ್ವಿಚಾರಣೆ ಮತ್ತು ತಾಂತ್ರಿಕ ಶಾಖೆಯ ಪತ್ರವ್ಯವಹಾರ. |
| 3) | ಶ್ರೀ ಜಿ.ಎಂ. ಮಲಕಣ್ಣವರ, ಲೆಕ್ಕ ಅಧೀಕ್ಷಕರು. | ಈ ವಿಭಾಗ ಕಛೇರಿಯ ಲೆಕ್ಕ ಶಾಖೆಯ ಮೇಲ್ವಿಚಾರಣೆ ಈ ವಿಭಾಗದ ಹಣಕಾಸಿಗೆ ಸಂಬಂಧಿಸಿದ ಕಾಮಗಾರಿ ವೆಚ್ಚ, ಉಗ್ರಾಣಕ್ಕೆ ಸಂಬಂಧಿಸಿದ ಹಣಕಾಸಿನ ವ್ಯವಹಾರ ಈ ವಿಭಾಗದ ಖಜಾನೆ ಸ್ವರೂಪದ ಕಾರ್ಯಗಳಾದ ಸಿಬ್ಬಂದಿ ವೇತನ ಹಾಗೂ ತತ್ಸಂಬಂಧದ ಹಣಕಾಸಿನ ಹೊಣೆಗಾರಿಕೆ. |
| 4) | ಶ್ರೀ ಸಿ. ದೊಡ್ಡಗೌಡರ, ಅಧೀಕ್ಷಕರು. | ಈ ವಿಭಾಗದ ಎ ಮತ್ತು ಬಿ ವೃಂದದ ಅಧಿಕಾರಿಗಳ ಮತ್ತು 'ಸಿ' ಮತ್ತು 'ಡಿ' ವೃಂದದ ಸಿಬ್ಬಂದಿಗಳ ಸೇವಾ ವಿಷಯಗಳ ನಿರ್ವಹಣೆ. |
| 5) | ಶ್ರೀ ಎಸ್. ವಾಯ್, ಹಮ್ಮಗಿ, ಪ್ರ.ದ.ಉ.ಪಾಲಕರು. | ಈ ವಿಭಾಗದ ಉಗ್ರಾಣ ಶಾಖೆಯ ಕೆಲಸಗಳ ನಿರ್ವಹಣೆ - ಲೆಕ್ಕ ಪತ್ರ ಶಾಖೆಯ ಮುಖಾಂತರ. |

ಈ ವಿಭಾಗ ಕಛೇರಿಯ ಅಧಿಕಾರಿಗಳು ಹಾಗೂ ನೌಕರರು ಕಛೇರಿ ಕೈಪಿಡಿ ಮತ್ತು ಕಛೇರಿ ಕಾರ್ಯವಿಧಾನದಲ್ಲಿ ಹಾಗೂ ಸಂಬಂಧಿಸಿದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನಕ್ಕೆ ಅನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದಾರೆ.

3) ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000ದ ಪ್ರಕರಣ (2) ಖಂಡ (ಎ), (ಸಿ) ಹಾಗೂ ಪ್ರಕರಣ 7ರ ಪ್ರಕಾರ ಈ ವಿಭಾಗ ಕಛೇರಿಗೆ ಸಂಬಂಧಿಸಿ ಈ ಕೆಳಕಂಡ ಪ್ರಾಧಿಕಾರವನ್ನು ನಿಗದಿಗೊಳಿಸಲಾಗಿದೆ.

| | | |
|---|---|---|
| ಪ್ರಕರಣ 2 ಖಂಡ (ಸಿ) | ಕಾರ್ಯಪಾಲಕ ಅಭಿಯಂತರವರ ಕಛೇರಿ, ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಕನೀನಿನಿ ನವಿಲುತೀರ್ಥ | ಸಾರ್ವಜನಿಕ ಪ್ರಾಧಿಕಾರ. |
| ಪ್ರಕರಣ 2 ಖಂಡ (ಎ) | ಕಾರ್ಯಪಾಲಕ ಅಭಿಯಂತರು ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ, ಕನೀನಿನಿ ನವಿಲುತೀರ್ಥ | ಸಕ್ಷಮ ಪ್ರಾಧಿಕಾರ. |
| ಪ್ರಕರಣ 7 | ಅಧೀಕ್ಷಕ ಅಭಿಯಂತರರು ಕನೀನಿನಿ, ಮವಿದಂಕಾನಿ ವೃತ್ತ, ನವಿಲುತೀರ್ಥ | ಅಪೀಲು ಪ್ರಾಧಿಕಾರ. |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಬಹುದಾಗಿದೆ.

**ವಿ.ಮ.ಬೆಲ್ಲದ**

ಪಿ.ಆರ್. 1569

ಕಾರ್ಯನಿರ್ವಾಹಕ ಇಂಜಿನೀಯರರು ಕಾರ್ಯಾಗಾರ ಮತ್ತು ಯಾಂತ್ರಿಕ ವಿಭಾಗ,
ಕರ್ನಾಟಕ ನೀರಾವರಿ ನಿಗಮ ನಿಯಮಿತ, ನವಿಲುತೀರ್ಥ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಆಸುಇ 380 ಸಅಸೇ 2003, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್ 2004**

ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗೆ ಸೇರಿದ ಈ ಕೆಳಕಂಡ ಶಾಖಾಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 32 ರಡಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಧೀನ ಕಾರ್ಯದರ್ಶಿ ಹುದ್ದೆಗಳಲ್ಲಿ ಈ ಕೆಳಗಿನಂತೆ ಸ್ಥಳ ನಿಯುಕ್ತಿಗೊಳಿಸಿದೆ. ಶಾಖಾಧಿಕಾರಿ ವೃಂದದ ಕರಡು ಜೇಷ್ಠತಾ ಪಟ್ಟಿ ಮೇಲೆ ಸ್ವೀಕೃತವಾಗಿರುವ ಆಕ್ಷೇಪಣೆಗಳನ್ನು ಪರಿಶೀಲಿಸಿ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿದ ನಂತರ ಈ ಆದೇಶದನ್ವಯ ಸ್ಥಳನಿಯುಕ್ತಿಗೊಳಿಸಿರುವುದನ್ನು ಪುನರ್ ಪರಿಶೀಲಿಸಲಾಗುವುದು.

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ನಿಯಮ 32 ರಡಿ ಸ್ಥಳನಿಯುಕ್ತಿಗೊಳಿಸಲಾದ ಹುದ್ದೆ : ಇಲಾಖೆ |
|---|---|---|
| 1. | ಬಿ.ಎಲ್. ಶಿವಕುಮಾರ್, ಶಾಖಾಧಿಕಾರಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ. | ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ರಾಜಕೀಯ) - ಖಾಲಿ ಹುದ್ದೆ |

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಹುದ್ದೆ | ನಿಯಮ 32 ರಡಿ ಸ್ಥಳನಿಯುಕ್ತಿಗೊಳಿಸಲಾದ ಹುದ್ದೆ : ಇಲಾಖೆ |
|---|---|---|
| 2. | ಎಸ್.ಜಿ. ನಾರಾಯಣ<br>ಶಾಖಾಧಿಕಾರಿ, ಕಂದಾಯ ಇಲಾಖೆ | ಅಧೀನ ಕಾರ್ಯದರ್ಶಿ, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ - ಖಾಲಿ ಹುದ್ದೆ |
| 3. | ವೈ.ಎನ್. ಕಪಿಲ<br>ಶಾಖಾಧಿಕಾರಿ, ಸಿ.ಆ.ಸು.ಇ. | ಅಧೀನ ಕಾರ್ಯದರ್ಶಿ, ಸುಜಲ ಜಲಾನಯನ ಅಭಿವೃದ್ಧಿ ಯೋಜನೆ, ಕೃಷಿ ಮತ್ತು ತೋಟಗಾರಿಕೆ ಇಲಾಖೆ - ಖಾಲಿ ಹುದ್ದೆ |
| 4. | ಬಿ.ಎಂ. ಲಕ್ಷ್ಮೀನಾರಾಯಣ<br>ಶಾಖಾಧಿಕಾರಿ, ಸಿ.ಆ.ಸು.ಇ | ಅಧೀನ ಕಾರ್ಯದರ್ಶಿ, (ಸೇವೆಗಳು-ಎ) ಲೋಕೋಪಯೋಗಿ ಇಲಾಖೆ - ಶ್ರೀ ಸಿ. ಬಸವರಾಜು ಇವರ ವರ್ಗಾವಣೆಯಿಂದ ತೆರವಾದ ಹುದ್ದೆಯಲ್ಲಿ |
| 5. | ಬಿ. ವಾಸುದೇವ<br>ಶಾಖಾಧಿಕಾರಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ. | ಅಧೀನ ಕಾರ್ಯದರ್ಶಿ (ಸಾರಿಗೆ), ಒಳಾಡಳಿತ ಮತ್ತು ಸಾರಿಗೆ ಇಲಾಖೆ - ಖಾಲಿ ಹುದ್ದೆಗೆ |
| 6. | ಎನ್.ಎ. ಮಾರ್ಗರೇಟ್<br>ಶಾಖಾಧಿಕಾರಿ, ಸಮಾಜ ಕಲ್ಯಾಣ ಇಲಾಖೆ. | ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಂಜೂರಾತಿ) - ಖಾಲಿ ಹುದ್ದೆಗೆ |
| 7. | ಕೆ. ನರಸಿಂಹಮೂರ್ತಿ<br>ಶಾಖಾಧಿಕಾರಿ, ಸಮಾಜ ಕಲ್ಯಾಣ ಇಲಾಖೆ | ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ ವ್ಯವಸ್ಥೆ ಮತ್ತು ಭೂದಾಖಲೆಗಳು) - ಖಾಲಿ ಹುದ್ದೆಗೆ |
| 8. | ವೈ.ಜೆ. ಅಗರ್‌ಖೇಡ್<br>ಶಾಖಾಧಿಕಾರಿ, ರಾಜ್ಯಪಾಲರ ಸಚಿವಾಲಯ | ಅಧೀನ ಕಾರ್ಯದರ್ಶಿ, ಸಿ.ಆ.ಸು.ಇ. (ಆಡಳಿತ) - ಶ್ರೀಮತಿ ಎನ್.ಆರ್. ಜಗನ್ನಾಥ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ |
| 9. | ಎಲ್. ರಾಜೇಶ್ವರಿ<br>ಶಾಖಾಧಿಕಾರಿ, ಕೃಷಿ ಮತ್ತು ತೋಟಗಾರಿಕೆ ಇಲಾಖೆ. | ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ - ಶ್ರೀಮತಿ ಸಿ. ಚಿನ್ನಮ್ಮ ಇವರ ವರ್ಗಾವಣೆಯಿಂದ ತೆರವಾದ ಸ್ಥಾನದಲ್ಲಿ |

**ಯು.ಪಿ. ಪ್ರಭು**

ಪಿ.ಆರ್. 1570 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿ.ವಿ) ಮತ್ತು ಹೆಚ್ಚುವರಿ ಜೆಎಂಎಫ್‌ಸಿ ನ್ಯಾಯಾಲಯ, ಸಾಗರ**

**ಸಿ.ಮಿಸ್.ನಂ: 167-2003, ಸಾಗರ, ದಿನಾಂಕ: 8ನೇ ನವೆಂಬರ್ 2004**

**ಫಿರ್ಯಾದುದಾರರು:** **ವಿರುದ್ಧ** **ಎದುರುದಾರರು:**

ಸಾಗರ ಗ್ರಾಮಾಂತರ ಠಾಣೆ ಇಲ್ಲ

**ಸಾರ್ವಜನಿಕ ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಈ ಕೆಳಗೆ ಕಾಣಿಸಿದ ಒಂದು ಹಸಿರು ಬಣ್ಣದ ಕೆಎ-15 ಹೆಚ್-2646 ನಂಬರ್ ಇರುವ ಎಕ್ಸೆಲ್ ಹೆವಿಡ್ಯೂಟಿ ಮೊಪೆಡ್ ಛಾಸಿ ನಂ: ಪಿ-3010 ಎಫ್ 349506, ಇಂಜಿನ್ ನಂ: ಪಿಎ-1010 ಎಂ-344758 ವಾಹನವನ್ನು ಸಾಗರ ಗ್ರಾಮಾಂತರ ಪೊಲೀಸರು ಪಿ.ಎಫ್. ಸಂಖ್ಯೆ: 200-2001 ದಿನಾಂಕ: 14.12.2001 ರಡಿಯಲ್ಲಿ ವಶಪಡಿಸಿಕೊಂಡು ಪ್ರಕರಣ ದಾಖಲು ಮಾಡಿದ್ದು ಸದರಿ ವಾಹನದ ಮಾಲೀಕರು ಯಾರು ಎಂದು ಈವರೆಗೂ ಪತ್ತೆಯಾಗಿರುವುದಿಲ್ಲ. ಆದ್ದರಿಂದ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ 6 ತಿಂಗಳ ಒಳಗಾಗಿ ಸದರಿ ವಾಹನದ ವಾರಸುದಾರರಾಗಲಿ ಹಕ್ಕುದಾರರಾಗಲಿ ಇದ್ದಲ್ಲಿ ಸದರಿ ವಾಹನವನ್ನು ತಮ್ಮದೆಂದು ಗುರುತಿಸುವ ಸಲುವಾಗಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು. ತಪ್ಪಿದಲ್ಲಿ ಸದರಿ ವಾಹನದ ವಾರಸುದಾರರು ಯಾರೂ ಇಲ್ಲ ಎಂದು ತಿಳಿದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಅನುಸೂಚಿ**

| ಕ್ರ. ಸಂ. | ಸೊತ್ತಿನ ವಿವರ | ಪ್ರಕರಣದ ನಂಬರ್ ಪಿ.ಆರ್. ನಂಬರ್ ಪಿ.ಎಫ್. ನಂಬರ್ | ವಶಪಡಿಸಿಕೊಂಡ ದಿನಾಂಕ |
|---|---|---|---|
| 1. | ಒಂದು ಹಸಿರು ಬಣ್ಣದ ಕೆಎ-15 ಹೆಚ್-2646 ನಂಬರ್ ಇರುವ ಎಕ್ಸೆಲ್ ಹೆವಿಡ್ಯೂಟಿ ಮೊಪೆಡ್ ಛಾಸಿ ನಂ: ಪಿ-3010 ಎಫ್ 349506 ಇಂಜಿನ್ ನಂ: ಪಿ-1010 ಎಂ 344758 | ಸಿ.ಮಿಸ್. 167-2003<br>ಪಿ.ಎಫ್.200-2001 | 14-12-2001 |

ಪಿ.ಆರ್. 1571 ಹೆಚ್ಚುವರಿ ಸಿವಿಲ್ ಜಡ್ಜ್ (ಕಿ.ವಿ) ಮತ್ತು ಹೆಚ್ಚುವರಿ ಜೆಎಂಎಫ್‌ಸಿ, ಸಾಗರ.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಸಂಖ್ಯೆ :ಎಸ್‌ಡಿಕೆ:86:ಡಿಟಿಸಿಆರ್:2001-2002 ದಿನಾಂಕ: 4ನೇ ನವೆಂಬರ್ 2004**

**ಉಪಸ್ಥಿತರು** : ಗೋವಿಂದಪ್ಪ,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್
ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** **ವಿರುದ್ಧ**

ಅಬಕಾರಿ ನಿರೀಕ್ಷಕರು,
ಮಂಗಳೂರು ಉಪ ವಿಭಾಗ, ಮಂಗಳೂರು.

**ಆರೋಪಿಗಳು:**

1. ಅಬ್ದುಲ್ ರಹಿಮಾನ್ (ಪ್ರಾಯ 28 ವರ್ಷ) ಬಿನ್: ಕುಂಜ್ಞಪ್ಪ, ಮುಳಿಗದ್ದೆ ಮನೆ, ಬಾಯಾರು ಅಂಚೆ, ಉಪ್ಪಳ, ಕಾಸರಗೋಡು.

**ಅರ್ಜಿದಾರರು**

ಶ್ರೀ ಶಶೀಂದ್ರನ್, ಬಿನ್: ಕೆ. ವಾಮದೇವನ್, ವಾಸ: ಸಾಲಿ ನಿವಾಸ, ಪುನ್ನಂಕೋನಮ್, ಕಾಚನಿ ಪೋಸ್ಟ್, ತ್ರಿವೇಂಡ್ರಮ್-12.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 31.8.2001 ರಂದು ಬೆಳಿಗ್ಗೆ 7-00 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರು ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ನಗರದ ಬಂಟ್ಸ್ ಹಾಸ್ಟೆಲ್ ವೃತ್ತದಿಂದ ಜ್ಯೋತಿ ಕಡೆಗೆ ತಿರುಗುವ ರಸ್ತೆಯಲ್ಲಿ ದೈನಂದಿನ ಅಬಕಾರಿ ದಾಳಿಗಾಗಿ ಹೋಗುತ್ತಿರುವಾಗ 20 ಗಜ ದೂರದಲ್ಲಿ ಒಂದು ಬಿಳಿ ಬಣ್ಣದ ಟಾಟಾಸುಮೋ ವಾಹನ ಭಾರವಾದ ವಸ್ತುವನ್ನು ಹೇರಿಕೊಂಡು ಹೋಗುತ್ತಿರಲು, ಸದ್ರಿ ವಾಹನವನ್ನು ತಡೆದು ನಿಲ್ಲಿಸಲು ನೀಡಿದ ಸೂಚನೆಯಂತೆ ಸಿಬ್ಬಂದಿಯವರು ವಾಹನವನ್ನು ಸುತ್ತುವರೆಯುತ್ತಿದ್ದಂತೆ ಸದ್ರಿ ಸುಮೋ ವಾಹನದ ಚಾಲಕ ವಾಹನವನ್ನು ನಿಲ್ಲಿಸಿ ಅಲ್ಲಿಂದ ಪರಾರಿಯಾಗಿರುತ್ತಾನೆ. ಸದ್ರಿ ಚಾಲಕನನ್ನು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಲಾಗಿ ಸಾಧ್ಯವಾಗಿರುವುದಿಲ್ಲ. ಆದರೆ ಸದ್ರಿ ವಾಹನದಲ್ಲಿದ್ದ ಸಹ ಚಾಲಕನನ್ನು ತಡೆದು ನಿಲ್ಲಿಸಿ ವಾಹನದ ಮುಂದಿನ ಬಾಗಿಲನ್ನು ತೆರೆದು ನೋಡಲಾಗಿ, ಮುಂದಿನ ಸೀಟಿನ ಅಡಿಯಲ್ಲಿ ಹಾಗೂ ಸೀಟಿನ ಹಿಂಭಾಗದಲ್ಲಿ ವಿವಿಧ ಡಿಸ್ಟಿಲರಿಯಲ್ಲಿ ತಯಾರಿಸಿದ ಮುದ್ರೆಯಿರುವ ಮದ್ಯದ ಬಾಟ್ಲಿಗಳು ಇರುವುದು ಕಂಡು ಬಂದಿರುತ್ತದೆ. ನಂತರ ಸ್ವತಂತ್ರ ಸಾಕ್ಷಿಗಾಗಿ ಪ್ರಯತ್ನ ಪಡಲಾಗಿ, ಯಾವುದೇ ವ್ಯಕ್ತಿಗಳು ಸಾಕ್ಷಿಯಾಗಿ ಬರಲು ನಿರಾಕರಿಸಿದ ಹಿನ್ನೆಲೆಯಲ್ಲಿ ಇಲಾಖಾ ಸಿಬ್ಬಂದಿಯವರನ್ನು ಪಂಚರನ್ನಾಗಿಸಿಕೊಂಡು ಸದ್ರಿ ವಾಹನವನ್ನು ಶೋಧನೆ ಮಾಡಲಾಗಿ, ವಾಹನದಲ್ಲಿ 65 ಪೆಟ್ಟಿಗೆಗಳಲ್ಲಿ ಈ ಕೆಳಗೆ ಕಾಣಿಸಿರುವ ಮದ್ಯದ ದಾಸ್ತಾನು ಇರುವುದು ಕಂಡು ಬಂದಿರುತ್ತದೆ. ಅಲ್ಲದೆ ಒಂದು ಬಿಳಿ ಬಣ್ಣದ 35 ಲೀಟರ್ ಸಾಮರ್ಥ್ಯದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 35 ಲೀಟರ್ ಮದ್ಯಸಾರವು ಸಹಾ ಪತ್ತೆಯಾಗಿರುತ್ತದೆ. ಮದ್ಯದ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರ. ಸಂ. | ಮದ್ಯದ ಹೆಸರು | 750 ಎಂ.ಎಲ್. | 375 ಎಂ.ಎಲ್. | ಲೀಟರ್‌ಗಳಲ್ಲಿ |
|---|---|---|---|---|
| 1. | ನಂ.1 ಹೈವೇ ವಿಸ್ಕಿ | 84 ಬಾಟ್ಲಿಗಳು | 360 ಬಾಟ್ಲಿಗಳು | 198 ಲೀ. |
| 2. | ಬಾಸ್ ವಿಸ್ಕಿ | 252 ಬಾಟ್ಲಿಗಳು | 288 ಬಾಟ್ಲಿಗಳು | 297 ಲೀ. |
| 3. | ಒರಿಜಿನಲ್ ವಿಸ್ಕಿ | - | 120 ಬಾಟ್ಲಿಗಳು | 45 ಲೀ. |
| 4. | ಕೊಲಂಬಿಯ ವಿಸ್ಕಿ | - | 120 ಬಾಟ್ಲಿಗಳು | 45 ಲೀ. |
| | | | ಒಟ್ಟು | **585 ಲೀ.** |

ಈ ಮೇಲಿನ ಮದ್ಯವನ್ನು ಸಾಗಣೆ ಮಾಡಲು ರಹದಾರಿ ಇದೆಯೇ ಎಂದು ಹಾಜರಿದ್ದ ಸಹ ಚಾಲಕನನ್ನು ವಿಚಾರಿಸಲಾಗಿ, ತನ್ನ ಬಳಿ ಯಾವುದೇ ರಹದಾರಿ ಇಲ್ಲವೆಂದು ತಿಳಿಸುತ್ತಾ ಸದ್ರಿ ಮದ್ಯವನ್ನು ಕೇರಳಕ್ಕೆ ಕೊಂಡುಹೋಗುತ್ತಿರುವುದಾಗಿ ತಿಳಿಸಿರುತ್ತಾನೆ. ಈ ರೀತಿ ಅಕ್ರಮವಾಗಿ ಮದ್ಯ ಮತ್ತು ಮದ್ಯಸಾರವನ್ನು ಸಾಗಣೆ ಮಾಡುವುದು ಅಬಕಾರಿ ಕಾಯ್ದೆಯಡಿಯಲ್ಲಿ ಶಿಕ್ಷಾರ್ಹವೆಂದು ತಿಳಿಸಿ ವಾಹನವನ್ನು ಪರಿಶೀಲಿಸಲು, ವಾಹನ ನೋಂದಣಿ ಸಂಖ್ಯೆ: ಕೆಎ-25 ಎಂ-3792 ಇಂಜಿನ್ ಸಂಖ್ಯೆ: ಡಿಎಸ್‌ಕ್ಯೂ 745813, ಚಾಸೀಸ್ ಸಂಖ್ಯೆ: ಎನ್ 385003/ಡಿಎಸ್‌ಕ್ಯೂ 977651 ಆಗಿರುತ್ತದೆ. ದೊರೆತ ಮದ್ಯ, ಮದ್ಯಸಾರ ಹಾಗೂ ವಾಹನವನ್ನು ಇಲಾಖೆಯ ವಶಕ್ಕೆ ತೆಗೆದುಕೊಂಡು ರಾಸಾಯನಿಕ ಪರೀಕ್ಷೆಗಾಗಿ ತರಹೆವಾರು ಹಾಗೂ ಗಾತ್ರವಾರು ಪೆಟ್ಟಿಗೆಗಳಿಂದ 750 ಮಿಲಿಯ 2 ಬಾಟ್ಲಿಗಳು, 375 ಮಿಲಿಯ 4 ಬಾಟ್ಲಿಗಳನ್ನು ಹಾಗೂ ಮದ್ಯಸಾರದಿಂದ 750 ಮಿಲಿಯ ಒಂದು ಬಾಟ್ಲಿಯನ್ನು ತೆಗೆದು, ಎಲ್ಲಾ ಬಾಟ್ಲಿಗಳ ಬಾಯಿಯನ್ನು ಬಟ್ಟೆದಾರಗಳಿಂದ ಕಟ್ಟಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಲಾಯಿತು. ಹಾಜರಿದ್ದ ಆರೋಪಿಯ ವಿಳಾಸವನ್ನು ವಿಚಾರಿಸಲಾಗಿ ಆತನು ತನ್ನ ಹೆಸರು ಕೆ. ಅಬ್ದುಲ್ ರೆಹಮಾನ್, ಬಿನ್: ಕುಂಜ್ಞಪ್ಪ (ಪ್ರಾಯ 28 ವರ್ಷ), ಮುಳಿಗದ್ದೆ ಮನೆ, ಕಾಸರಗೋಡು ಜಿಲ್ಲೆ ಎಂದು ತಿಳಿಸಿರುತ್ತಾನೆ. ಆರೋಪಿಯ ಹೆಸರು, ವಿಳಾಸವಿರುವ ಗುರುತಿನ ಚೀಟಿಗಳನ್ನು ಅಂಟಿಸಲಾಯಿತು. ನಂತರ ವಾಹನದ ಸಹ ಚಾಲಕನನ್ನು ದಸ್ತಗಿರಿ ಮಾಡಿ ದೊರೆತ ಮದ್ಯ, ಮದ್ಯಸಾರ ಹಾಗೂ ವಾಹನವನ್ನು ಸರಕಾರದಿಂದ ವಶಪಡಿಸಿ, ಸ್ಥಳದಲ್ಲಿಯೇ ಮಹಜರು ತಯಾರಿಸಿ ಕಛೇರಿಗೆ ಹಿಂತಿರುಗಿ ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 13/2001-02 ದಿನಾಂಕ: 31.8.2001 ರ ಮೂಲಕ ತಕ್ಷೀರು ದಾಖಲೆಪಡಿಸಿ ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೂ ಹಾಗೂ ಪ್ರಾಧಿಕಾರಕ್ಕೂ ಸಲ್ಲಿಸಿ ಪ್ರಾಧಿಕಾರದ ಅನುಮತಿಯಂತೆ ಪ್ರಕರಣವನ್ನು ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಕೈಗೊಂಡ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರು ಪ್ರಕರಣದಲ್ಲಿ ಜಪ್ತಿಗೊಳಿಸಿದ್ದ ಮದ್ಯವನ್ನು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ್ದು, ಸದ್ರಿ ಮದ್ಯವು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವು ಹಾಗೂ ಮದ್ಯಸಾರವು ಮಾನವ ಸೇವನೆಗೆ ಯೋಗ್ಯವಾಗಿರುವುದರಿಂದ ಸದ್ರಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಕೋರಿದ್ದು, ಅಬಕಾರಿ ನಿರೀಕ್ಷಕರ ಶಿಫಾರಸ್ಸಿನಂತೆ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಆದೇಶವನ್ನು ಪ್ರಾಧಿಕಾರವು ದಿನಾಂಕ: 10.10.2001 ರಂದು ನೀಡಿರುತ್ತದೆ.

ಈ ಪ್ರಕರಣದಲ್ಲಿ ಜಪ್ತಿಪಡಿಸಲಾದ ವಾಹನ ಮಾಲೀಕರಾದ ಶಶೀಂದ್ರನ್ ಇವರು ದಿನಾಂಕ 31.1.2002 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ವಾಹನದ ಅಸಲಿ ಸಂಖ್ಯೆಯು ಕೆಎಲ್-02 ಇ-9711 ಎಂದು ಸದ್ರಿ ವಾಹನವನ್ನು ನಕಲಿ ಸಂಖ್ಯೆ: ಕೆಎ-25 ಎಂ-3792 ಎಂದು ಜಪ್ತಿಪಡಿಸಿರುವುದಾಗಿ ತಿಳಿಸುತ್ತಾ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆಗೊಳಿಸಬೇಕಾಗಿ ಕೋರಿರುತ್ತಾರೆ. ಅರ್ಜಿದಾರರ ಕೋರಿಕೆಯನ್ನು ಮನ್ನಿಸಿ ಪ್ರಾಧಿಕಾರವು ಮಧ್ಯಂತರ ಬಿಡುಗಡೆಗೆ ರೂ.1,00,000/- ಗಳ ಭದ್ರತೆಯನ್ನು ಹಾಗೂ ಇನ್ನಿತರ ಷರತ್ತುಗಳಿಗೆ ವಾಹನವನ್ನು ಮಧ್ಯಂತರ ಅವಧಿಗೆ ಬಿಡುಗಡೆ ಮಾಡಿ ದಿನಾಂಕ: 21.11.2002 ರಂದು ಆದೇಶವನ್ನು ಹೊರಡಿಸಿದ್ದು, ಈ ಪ್ರಾಧಿಕಾರದ ಆದೇಶದ ವಿರುದ್ಧ ಅರ್ಜಿದಾರರು ಮಾನ್ಯ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲಾಗಿದ್ದು, ಮಾನ್ಯ ಸತ್ರ ನ್ಯಾಯಾಲಯವು ಪ್ರಾಧಿಕಾರವು ಭದ್ರತೆಗಾಗಿ ರೂ.1,00,000/- ಗಳ ಇಂಡೆಮ್ನಿಟಿ ಬಾಂಡ್ ಹಾಗೂ ಎರಡು ಜಾಮೀನು ಪಡೆದು ವಾಹನವನ್ನು ವಾಹನ ಮಾಲೀಕರ ಮಧ್ಯಂತರ ವಶಕ್ಕೆ ನೀಡಲು ಆದೇಶಿಸಿರುತ್ತದೆ. ಆದರೆ ವಾಹನ ಮಾಲೀಕರು ಸತ್ರ ನ್ಯಾಯಾಲಯದ ಆದೇಶದಂತೆ ಇಂಡೆಮ್ನಿಟಿ ಬಾಂಡ್ ಹಾಗೂ ಜಾಮೀನನ್ನು ನೀಡಿ ವಾಹನವನ್ನು ಮಧ್ಯಂತರ ವಶಕ್ಕೆ ಪಡೆದಿರುವುದಿಲ್ಲ. ವಾಹನವು ಇಲಾಖೆಯ ವಶದಲ್ಲಿಯೇ ಇರುತ್ತದೆ. ದಿನಾಂಕ: 15.7.2004 ರಂದು ಈ ಪ್ರಾಧಿಕಾರವು ವಾಹನ ಮಾಲೀಕರಿಗೆ ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು, ಸದ್ರಿ ನೋಟೀಸು ವಾಹನ ಮಾಲೀಕರಿಗೆ ಸ್ವೀಕೃತವಾಗಿದ್ದು ನೀಡಲಾದ ನೋಟೀಸಿಗೆ ಉತ್ತರ ನೀಡಿರುವುದಿಲ್ಲ ಹಾಗೂ ಈ ಕಛೇರಿಯಿಂದ ನೀಡಲಾದ ನೋಟೀಸಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಸರ್ಕಾರದ ಅಭಿಯೋಜನೆ ಪರವಾಗಿ ಮೂರು ಸಾಕ್ಷಿಗಳನ್ನು ವಿಚಾರಣೆಗೆ ಗುರಿಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿದೆ. ವಾಹನ ಮಾಲೀಕರ ಪರ ಯಾವುದೇ ಸಾಕ್ಷಿಯನ್ನು ಹಲರಾರು ಬಾರಿ ನೋಟೀಸುಗಳನ್ನು ನೀಡಿದ್ದರೂ ಹಾಗೂ ಅರ್ಜಿದಾರರ ಪರ ವಕೀಲರಿಗೆ ವಿಚಾರಣೆಗಾಗಿ ಪ್ರತಿರಕ್ಷಾ ಸಾಕ್ಷಿಯನ್ನು ಹಾಜರುಪಡಿಸಲು ಕೆಲವು ಅವಕಾಶಗಳನ್ನು ನೀಡಿದ್ದರೂ ಪ್ರತಿರಕ್ಷಾ ಪರ

ಯಾವುದೇ ಸಾಕ್ಷಿಗಳು ಪ್ರಾಧಿಕಾರದ ಮುಂದೆ ವಿಚಾರಣೆಗಾಗಿ ಹಾಜರಾಗಿರುವುದಿಲ್ಲ. ಈ ಪ್ರಕರಣದಲ್ಲಿ ಸರ್ಕಾರದ ಪರ ಸಲ್ಲಿಸಲಾಗಿರುವ ಸಾಕ್ಷ್ಯಾಧಾರಗಳಿಂದ ಈ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ: 31.8.2001 ರಂದು ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-25 ಎಂ-3792 ರಲ್ಲಿ ಅಕ್ರಮವಾಗಿ ಮದ್ಯ ಮತ್ತು ಮದ್ಯಸಾರವನ್ನು ಸಾಗಣೆ ಮಾಡಲಾಗಿತ್ತೇ?

2. ಅರ್ಜಿದಾರರು ವಶಪಡಿಸಿಕೊಂಡಿರುವ ವಾಹನದ ಮಾಲೀಕ ತಾನೆಂದು ಮತ್ತು ತನ್ನ ತಿಳುವಳಿಕೆಗೆ ಬಾರದೇ ಅಕ್ರಮ ಮದ್ಯದ ಸಾಗಣೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂದು ಸಾಬೀತುಪಡಿಸಿದ್ದಾರೆಯೇ?

3. ಜಪ್ತಿಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ ಪರಿಗಣಿಸಿದೆ.

**ಪ್ರಾ.ಸಾ-3:**

ಶ್ರೀ ಜಾರ್ಜ್ ಪಿಂಟೋ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ:8.1.2004 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷ್ಯಿಯನ್ನು ನೀಡಿರುತ್ತಾರೆ. ತಾನು ದಿ: 31.8.2001 ರಂದು ಬೆಳಿಗ್ಗೆ 7.00 ಗಂಟೆ ಸಮಯ ಮಂಗಳೂರು ನಗರದ ಬಂಟ್ಸ್ ಹಾಸ್ಟೆಲ್ ಬಳಿ ಜ್ಯೋತಿ ಸರ್ಕಲ್‌ಗೆ ಅಭಿಮುಖವಾಗಿ ಗಸ್ತು ಕಾರ್ಯ ನಡೆಸುತ್ತಿದ್ದಾಗ ನೇತ್ರಾಲಯದ ಮುಂಭಾಗ ಒಂದು ಟಾಟಾ ಸುಮೋ ವಾಹನ ಜ್ಯೋತಿ ಕಡೆಗೆ ಭಾರವಾದ ವಸ್ತುವನ್ನು ಹೇರಿಕೊಂಡು ಬರುವುದನ್ನು ಗಮನಿಸಿ, ಸಂಶಯದ ಆಧಾರದ ಮೇಲೆ ಸದ್ರಿ ವಾಹನವನ್ನು ಸುತ್ತುವರೆಯುವಷ್ಟರಲ್ಲಿ ಟಾಟಾ ಸುಮೋದ ಚಾಲಕನು ವಾಹನವನ್ನು ನಿಲ್ಲಿಸಿ ಪರಾರಿಯಾಗಿದ್ದು ಪ್ರಯತ್ನಪಟ್ಟರೂ ಸಿಕ್ಕಿರುವುದಿಲ್ಲ. ವಾಹನದಲ್ಲಿದ್ದ ಸಹ ಚಾಲಕನನ್ನು ತಡೆದು ನಿಲ್ಲಿಸಿ ಸ್ವತಂತ್ರ ಸಾಕ್ಷಿಗೆ ಪ್ರಯತ್ನಿಸಲು ಅಕ್ಕಪಕ್ಕದ ವ್ಯಕ್ತಿಗಳು ಸಾಕ್ಷಿಯಾಗಿ ಬರಲು ನಿರಾಕರಿಸಿದ ಹಿನ್ನೆಲೆಯಲ್ಲಿ ಇಲಾಖೆಯ ಸಿಬ್ಬಂದಿಯನ್ನೇ ಸಾಕ್ಷಿದಾರರನ್ನಾಗಿಸಿ ಶೋಧನಾ ಪಟ್ಟಿ ತಯಾರಿಸಿ ವಾಹನವನ್ನು ಶೋಧನೆ ಮಾಡಲಾಗಿ, ವಾಹನ ಸಂಖ್ಯೆ: ಕೆಎ-25 ಎಂ-3792 ಎಂದೂ ಇಂಜಿನ್ ಸಂಖ್ಯೆ: ಡಿಎಸ್‌ಕ್ಯೂ-745813, ಚಾಸೀಸ್ ಸಂಖ್ಯೆ: 385003/ಡಿಎಸ್‌ಕ್ಯೂ 917651 ಇದ್ದು, ವಾಹನವನ್ನು ಶೋಧನೆ ಮಾಡಲಾಗಿ ವಾಹನದ ಮುಂಭಾಗದ ಸೀಟಿನಲ್ಲಿ ಮತ್ತು ಹಿಂದಿನ ಸೀಟಿನಲ್ಲಿ 65 ಪೆಟ್ಟಿಗೆ ವಿವಿಧ ಮಾದರಿ ಬಾಟ್ಲಿಗಳು ಹಾಗೂ 35 ಲೀಟರ್ ಗಾತ್ರದ ಒಂದು ಬಿಳಿ ಬಣ್ಣದ ಕ್ಯಾನಿನಲ್ಲಿ 35 ಲೀಟರ್ ಮದ್ಯಸಾರವು ಇರುವುದು ಕಂಡು ಬಂತು. ವಾಹನದಲ್ಲಿದ್ದ ಸಹ ಚಾಲಕನನ್ನು ಪರವಾನಿಗೆ ಬಗ್ಗೆ ವಿಚಾರಿಸಲಾಗಿ ತನ್ನ ಬಳಿ ಅದಾವುದೂ ಇಲ್ಲವೆಂದು, ಸದ್ರಿ ಮದ್ಯ ಮತ್ತು ಮದ್ಯಸಾರವನ್ನು ಕಾಸರಗೋಡಿಗೆ ಕೊಂಡೊಯ್ಯುತ್ತಿರುವುದಾಗಿ ತಿಳಿಸಿರುತ್ತಾನೆ. ಈ ರೀತಿ ಅಕ್ರಮವಾಗಿ ಸಾಗಣೆ ಮಾಡುವುದು ಅಬಕಾರಿ ಕಾನೂನಿನಂತೆ ಶಿಕ್ಷಾರ್ಹವೆಂದು ತಿಳಿಸಿ ಮದ್ಯ, ಮದ್ಯಸಾರ ಹಾಗೂ ಈ ಅಕ್ರಮ ಸಾಗಾಟಕ್ಕೆ ಉಪಯೋಗಿಸಿದ ವಾಹನವನ್ನು ಸರಕಾರದ ವಶಕ್ಕೆ ತೆಗೆದುಕೊಳ್ಳಲಾಯಿತು. ನಂತರ ರಾಸಾಯನಿಕ ಪರೀಕ್ಷೆಗಾಗಿ ಮದ್ಯದಿಂದ 750 ಮಿಲಿಯ 2 ಶೀಷೆ, 375 ಮಿಲಿಯ 4 ಶೀಷೆ ಹಾಗೂ 750 ಮಿಲಿಯ ಮದ್ಯಸಾರವನ್ನು ಪ್ರತ್ಯೇಕಿಸಿ ಇಲಾಖೆಯ ಸೀಲ್‌ನಿಂದ ಸೀಲ್ ಮಾಡಿ, ಬಳಿಕ ಆರೋಪಿಯ ವಿಳಾಸ ಕೇಳಲು ತನ್ನ ಹೆಸರು ಅಬ್ದುಲ್ ರೆಹಮಾನ್, ಬಿನ್: ಕುಂಜ್ಞಪ್ಪ (ಪ್ರಾಯ 28 ವರ್ಷ), ಮುಳಿಗದ್ದೆ ಮನೆ, ಬಾಯಾರು ಅಂಚೆ, ಕಾಸರಗೋಡು ಎಂದು ತಿಳಿಸಿರುತ್ತಾನೆ. ಬಳಿಕ ಆರೋಪಿಯ ಹೆಸರು ಮತ್ತು ವಿಳಾಸವಿರುವ ಚೀಟಿಗಳನ್ನು ಮಾದರಿ ಶೀಷೆಗಳಿಗೆ ಅಂಟಿಸಲಾಯಿತು. ಸ್ಥಳದಲ್ಲಿಯೇ ಮಹಜರು ಮಾದರಿ ಸೀಲ್ ತಯಾರಿಸಲಾಯಿತು. ನಂತರ ವಶಪಡಿಸಿಕೊಂಡ ಮದ್ಯ, ಮದ್ಯಸಾರ ಹಾಗೂ ವಾಹನವನ್ನು ಕಛೇರಿಗೆ ತಂದು ಪ್ರಥಮ ಮಾಹಿತಿ ವರದಿ ತಯಾರಿಸಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ನ್ಯಾಯಾಲಯಕ್ಕೂ, ಪ್ರಾಧಿಕಾರಕ್ಕೂ ಸಲ್ಲಿಸಿ ಪ್ರಾಧಿಕಾರದ ಅನುಮತಿಯ ಮೇರೆಗೆ ಪ್ರಕರಣವನ್ನು ಅಬಕಾರಿ ನಿರೀಕ್ಷಕರು, ಹಂಪನಕಟ್ಟೆ ವಲಯ ಇವರಿಗೆ ಹಸ್ತಾಂತರಿಸಿರುವುದಾಗಿ ಸಾಕ್ಷಿ ನೀಡಿರುತ್ತಾರೆ. ಸ್ಥಳದಲ್ಲಿ ತಯಾರಿಸಿದ ಯಾದಾಸ್ತಿನ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-3 ಎಂದು ಈಗಾಗಲೇ ಗುರುತಿಸಲಾಗಿದೆ. ಅಬಕಾರಿ ಉಪ ಆಯುಕ್ತರಿಗೆ ಸಲ್ಲಿಸಿದ್ದ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಗಿದೆ. ಸ್ಥಳದಲ್ಲಿ ತಯಾರಿಸಿದ ಸರ್ಚ್ ಲಿಸ್ಟ್‌ನ ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ-5 ಎಂದು ಗುರುತಿಸಲಾಗಿದೆ. ತಕ್ಷೀರು ದಿನದಂದು ನ್ಯಾಯಾಲಯದಿಂದ ವಾರಂಟು ಪಡೆಯಲು ಸಮಯಾವಕಾಶವಿಲ್ಲದ್ದರಿಂದ ಕಾರಣಗಳನ್ನು ಸರ್ಚ್ ಲಿಸ್ಟ್‌ನಲ್ಲಿ ನಮೂದಿಸಿರುತ್ತೇನೆ. ಪ್ರಕರಣದ ಪ್ರಥಮ ಮಾಹಿತಿ ವರದಿಯನ್ನು ನೋಡಿ ಅದನ್ನು ನಿಶಾನೆ ಪಿ-4 ಎಂದು ಗುರುತಿಸಲಾಗಿದೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಕ್ಷೀರು ನಡೆದ ಸ್ಥಳ ನಮ್ಮ ಕಛೇರಿಯಿಂದ 1 ಕಿ.ಮೀ. ದೂರದಲ್ಲಿದೆ. ಆದುದರಿಂದ ಬೆಳಿಗ್ಗೆ 7.00 ಗಂಟೆಗೆ ವಾಹನ ತಪಾಸಣೆ ಪ್ರಾರಂಭಿಸಿದೆನು. ತಕ್ಷೀರು ಸ್ಥಳದ ಹತ್ತಿರ ಒಬ್ಬ ಟ್ರಾಫಿಕ್ ಪೊಲೀಸ್ ಇನ್ಸ್‌ಪೆಕ್ಟರು ಇರುತ್ತಾರೆಂದು ಗಮನಿಸಿರುವುದಿಲ್ಲ. ನನಗೆ ಖಚಿತವಾದ ವರ್ತಮಾನ ಇರಲಿಲ್ಲ. ವಾಹನದಲ್ಲಿ ಭಾರವಾದ ವಸ್ತುವನ್ನು ಸಾಗಿಸುತ್ತಿದ್ದರಿಂದ ಸಂಶಯಗೊಂಡು ಅದನ್ನು ತಪಾಸಣೆ ಮಾಡಿದೆವು. ಆ ವೇಳೆ ವಾಹನವು ಸಾಧಾರಣ ವೇಗದಲ್ಲಿ ಚಲಿಸುತ್ತಿತ್ತು. ನಮ್ಮ ವಾಹನ ಅದಕ್ಕಿಂತಲೂ ನಿಧಾನವಾಗಿ ಚಲಿಸುತ್ತಿತ್ತು. ವಾಹನವನ್ನು ಸಾಧಾರಣ 20 ಗಜ ದೂರದಿಂದ ನೋಡಿರುತ್ತೇವೆ. ವಾಹನವು ಜ್ಯೋತಿ ಕಡೆಗೆ ಮುಖ ಮಾಡಿ ಹೋಗುತ್ತಿತ್ತು. ಸಹ ಚಾಲಕನನ್ನು ವಿಚಾರಿಸಿದಾಗ ತಾವು ಬೈಕಂಪಾಡಿಯಿಂದ ಕೇರಳಕ್ಕೆ ಹೋಗುತ್ತಿರುವುದಾಗಿ ತಿಳಿಸಿರುತ್ತಾನೆ. ಬೈಕಂಪಾಡಿಯಿಂದ ಕಾಸರಗೋಡಿಗೆ ಹೋಗಲು ಹತ್ತಿರ ದಾರಿಯಿದೆ ಎಂದರೆ ಸರಿ, ಸ್ವತಂತ್ರ ಸಾಕ್ಷಿ ಕರೆದರೂ ಬಂದಿಲ್ಲವೆಂದು ಮಹಜರಿನಲ್ಲಿ ನಮೂದಿಸಿದ್ದೇನೆ. ಬೇರೆ ಸಾಕ್ಷಿಯನ್ನು ಹುಡುಕಲು ಕಾಲಾವಕಾಶ ಇರಲಿಲ್ಲ. ವಾಹನವನ್ನು ಶೋಧನೆ ಮಾಡುವಾಗ ಹೆಚ್ಚಿನ ಸಂಖ್ಯೆಯ ವಾಹನ ಇರಲಿಲ್ಲ. ತಕ್ಷೀರು ಸ್ಥಳದಿಂದ 15 ಗಜ ದೂರದಲ್ಲಿ ವಿಜಯ ಕ್ಲಿನಿಕ್ ಬರುತ್ತೆ. ಅಲ್ಲಿ ವಾಚ್‌ಮೆನ್ ಮತ್ತು ಸಿಬ್ಬಂದಿಗಳಿರುತ್ತಾರೆ ಎಂದು ಗೊತ್ತಿಲ್ಲ. ಚಾಲಕನು ತಪ್ಪಿಸಿಕೊಳ್ಳುವಾಗ ನನ್ನ ಸಿಬ್ಬಂದಿಯವರು ಬೆನ್ನಟ್ಟಿದ್ದಾರೆ. ಯಾವ ಬದಿ ಹೋದರೆಂದು ನನಗೆ ನೆನಪಿಲ್ಲ. ಮಹಜರಿನಲ್ಲಿ ಸರ್ಚ್ ವಾರಂಟ್ ಪಡೆಯುವ ಬಗ್ಗೆ ಕಾರಣ ನಮೂದಿಸಿಲ್ಲವೆಂದರೆ ಸರಿ. ವಶಪಡಿಸಿದ ಮದ್ಯವು 65 ಪೆಟ್ಟಿಗೆಗಳಿದ್ದು, 585 ಲೀಟರ್ ಮದ್ಯ ಇರುತ್ತದೆ ಹಾಗೂ 35 ಲೀಟರ್ ಮದ್ಯಸಾರವಿರುತ್ತೆ. ಈ ಪ್ರಕರಣದಲ್ಲಿ ಒಟ್ಟು 7 ಮಾದರಿ ಶೀಷೆಗಳನ್ನು ತಯಾರಿಸಿರುತ್ತೇವೆ. ಆ ದಿನದಂದು ಯಾವುದೇ ವಾಹನವನ್ನು ವಶಪಡಿಸಿಕೊಂಡಿಲ್ಲವೆಂದರೆ ಸರಿಯಲ್ಲ. ಈ ವಾಹನಕ್ಕೂ ಮತ್ತು ಮದ್ಯಕ್ಕೂ ಯಾವುದೇ ಸಂಬಂಧವಿಲ್ಲವೆಂದರೆ ಸರಿಯಲ್ಲ. ಪ್ರಕರಣದ ದಾಖಲೆಗಳನ್ನು ಕಛೇರಿಯಲ್ಲಿ ತಯಾರಿಸಿದ್ದೇವೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಲ್ಲಿ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತಿರುವುದಿಲ್ಲ.

**ಪ್ರಾ.ಸಾ:1**

ಶ್ರೀ ಲಕ್ಷ್ಮಣ ಗೌಡ, ಅಬಕಾರಿ ಉಪ ಅಧೀಕ್ಷಕರು, ಹಾಸನ ಉಪ ವಿಭಾಗ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ದಿನಾಂಕ: 24.7.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ತಾನು ಜೂನ್-98 ರಿಂದ ಏಪ್ರಿಲ್-2003 ರ ವರೆಗೆ ಹಂಪನಕಟ್ಟೆ ವಲಯದ ಅಬಕಾರಿ ನಿರೀಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದೆ. ಈ ಮೊಕದ್ದಮೆಗೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಹಾಗೂ ವಶಪಡಿಸಿಕೊಂಡ ಮದ್ಯ, ಇನ್ನಿತರ ಸಾಮಾಗ್ರಿಗಳನ್ನು ದಿನಾಂಕ: 21.9.2001 ರಂದು ಹಸ್ತಾಂತರಿಸಲಾಗಿದೆ. ತಾನು ಸದ್ರಿ ಮೊಕದ್ದಮೆಯ ಮಾದರಿ ಶೀಷೆಗಳನ್ನು ದಿನಾಂಕ: 9.10.2001 ರಂದು ತನ್ನ ಕಛೇರಿಯ ಅಬಕಾರಿ ರಕ್ಷಕ ಮೋಹನ್ ಕುಮಾರ್ ಮೂಲಕ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿ ಕೊಟ್ಟಿರುತ್ತೇನೆ. ರಾಸಾಯನಿಕ ವರದಿಯು ದಿನಾಂಕ: 10.10.2001 ರಂದು ಸ್ವೀಕೃತವಾಗಿದೆ. ಸದ್ರಿ ವರದಿಯ ಪ್ರಕಾರ ನಿಗದಿತ ಪ್ರಮಾಣದ ಮದ್ಯದ ತೀಕ್ಷ್ಣತೆ ಇರುವುದು ಕಂಡು ಬಂದಿರುತ್ತದೆ. ಪ್ರಕರಣದ ರಾಸಾಯನಿಕ ವಿಶ್ಲೇಷಣಾ ವರದಿಯ ಛಾಯಾ ಪ್ರತಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮದ್ಯ ಹಾಗೂ ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-25 ಎಂ-3792 ಇದ್ದು, ಅವುಗಳನ್ನು ವಶಕ್ಕೆ ಪಡೆದು ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ್ದು, ಈ ವರದಿಯನ್ನು ನೋಡಿದೆನು. ಅದನ್ನು ನಿಶಾನೆ ಪಿ-2 ಎಂದು ಗುರುತಿಸಲಾಯಿತು. ವಾಹನದ ನೋಂದಾಯಿತ ಮಾಲೀಕರ ಹೆಸರನ್ನು ತಿಳಿದುಕೊಳ್ಳಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರವನ್ನು ಕಳುಹಿಸಿರುತ್ತೇನೆ. ಈ ಪ್ರಕರಣದಲ್ಲಿ ಹಸ್ತಾಂತರಿಸಿದ ಮಹಜರಿನ ಪ್ರತಿಯನ್ನು ಹಾಗೂ ಪ್ರಥಮ ಮಾಹಿತಿ ವರದಿಯನ್ನು ನೋಡಿ ಅವುಗಳನ್ನು ನಿಶಾನೆ ಪಿ-3 ಮತ್ತು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಈ ಪ್ರಕರಣದಲ್ಲಿ ಆರೋಪಿಯ ವಿರುದ್ಧ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುವುದಿಲ್ಲ ಎಂದು ಸಾಕ್ಷಿಯನ್ನು ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಾನು ವರ್ಗವಾಗಿ ಹೋಗುವಾಗ ಈ ಪ್ರಕರಣದ ಕಡತವನ್ನು ನಂತರ ಬಂದ ಅಧಿಕಾರಿಗಳಿಗೆ ಹಸ್ತಾಂತರಿಸಿರುತ್ತೇನೆ. ಅವರು ಈ ಪ್ರಕರಣದ ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿರುವುದರ ಬಗ್ಗೆ ನನಗೆ ಗೊತ್ತಿಲ್ಲ. ಈ ಪ್ರಕರಣದಲ್ಲಿ ಇತರ ಸಾಕ್ಷಿಗಳ ಹೇಳಿಕೆ ಪಡೆದಿರುವುದಿಲ್ಲ. ಈ ಪ್ರಕರಣ ತನ್ನಲ್ಲಿ 1 ವರ್ಷ 7 ತಿಂಗಳು ಇದ್ದರೂ ಬೇರೆ ಕೆಲಸದ ಒತ್ತಡದಿಂದ ದೋಷಾರೋಪಣೆಯನ್ನು ಸಲ್ಲಿಸಲು ಸಾಧ್ಯವಾಗಿಲ್ಲ. ಪ್ರಕರಣದ ತನಿಖೆಯನ್ನು ಬೇರೆಯವರಿಗೆ ವಹಿಸಿಕೊಡಲು ಅವಕಾಶವಿಲ್ಲದ ಕಾರಣ ಬೇರೆಯವರಿಗೆ ವಹಿಸಿಕೊಟ್ಟಿಲ್ಲ. ಆರ್.ಟಿ.ಒ. ಕಛೇರಿಗೆ ಒಂದು ಬಾರಿ ಪತ್ರವನ್ನು ಬರೆದಿರುತ್ತೇನೆ. ಸದ್ರಿ ವಾಹನದ ತಯಾರಕರಾದ ಟಾ.ಟಾ. ಕಂಪನಿಗೆ ಕಾಗದ ಬರೆದಿಲ್ಲ. ಈ ವಾಹನದ ಮಧ್ಯಂತರ ಬಿಡುಗಡೆ ಆದೇಶದ ಪ್ರತಿಯು ನನಗೆ ದಿನಾಂಕ: 5.12.2002ಕ್ಕೆ ತಲುಪಿದೆ. ಮಧ್ಯಂತರ ಬಿಡುಗಡೆಗೆ ನೀಡಿದ್ದ ಅರ್ಜಿಯ ಬಗ್ಗೆ ನನಗೆ ಮಾಹಿತಿ ಇರಲಿಲ್ಲ. ಮಧ್ಯಂತರ ಆದೇಶದಲ್ಲಿ ಶಶೀಂದ್ರನ್ ಅರ್ಜಿದಾರರಿರುವುದು ಕಂಡು ಬರುತ್ತದೆ. ಸದ್ರಿಯವರಿಗೆ ನೋಟೀಸು ಕಳುಹಿಸಿ ತನಿಖೆ ಕೈಗೊಂಡಿಲ್ಲ. ಈ ಪ್ರಕರಣದಲ್ಲಿ ಯಾವುದೇ ತನಿಖೆ ಕೈಗೊಳ್ಳದೆ ಪ್ರಕರಣವನ್ನು ಹಾಗೆಯೇ ಇಟ್ಟಿರುತ್ತೇನೆಂದರೆ ಸರಿಯಲ್ಲ. ಪ್ರಕರಣದಲ್ಲಿ ವಾಹನವನ್ನು ವಶಪಡಿಸಿಕೊಂಡಿಲ್ಲವೆಂದರೆ ಸರಿಯಲ್ಲ. ರಾಸಾಯನಿಕ ತಜ್ಞರಿಗೆ ಯಾವುದೇ ಮಾದರಿ ಶೀಷೆಗಳನ್ನು ಕಳುಹಿಸದೇ ಒಂದು ಮುದ್ರಿತ ಫಾರ್ಮ್‌ನಲ್ಲಿ ತಜ್ಞರ ವರದಿಯನ್ನು ತಯಾರಿಸಿರುತ್ತೇವೆಂದರೆ ಸರಿಯಲ್ಲ. ಈ ವಾಹನದಿಂದ ಮದ್ಯವನ್ನು ವಶಪಡಿಸಿಕೊಂಡಿಲ್ಲವೆಂದರೆ ಸರಿಯಲ್ಲ ಎಂದು ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

**ಪ್ರಾ.ಸಾ-2:**

ಶ್ರೀ ಮೋಹನ್ ಕುಮಾರ್, ಅಬಕಾರಿ ರಕ್ಷಕರು, ಹಂಪನಕಟ್ಟೆ ವಲಯ ಇವರು ದಿನಾಂಕ: 24.7.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತನ್ನ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ: 9.10.2001 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ 7 ಮಾದರಿ ಶೀಷೆಗಳನ್ನು ರಾಸಾಯನಿಕ ವಿಶ್ಲೇಷಣಾ ತಜ್ಞರಿಗೆ ತಲುಪಿಸಿರುತ್ತೇನೆ. ದಿನಾಂಕ: 11.10.2001 ರಂದು ಅವರಿಂದ 7 ಬಾಟ್ಲಿಗಳನ್ನು ವರದಿಯೊಂದಿಗೆ ತಂದಿರುತ್ತೇನೆ. ವರದಿಯ ಛಾಯಾ ಪ್ರತಿಯನ್ನು ನೋಡಿದೆನು. ಈಗಾಗಲೇ ಅದನ್ನು ನಿಶಾನೆ ಪಿ-1 ಎಂದು ಗುರುತಿಸಲಾಗಿದೆ ಎಂದು ಸಾಕ್ಷಿ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸುತ್ತಾ, ಮಾದರಿ ಶೀಷೆಗಳನ್ನು ಅಬಕಾರಿ ನಿರೀಕ್ಷಕರಿಂದ ಪಡೆಯುವಾಗ ಎಷ್ಟು ಸಮಯವಾಗಿತ್ತೆಂದು ಹೇಳಲು ಸಾಧ್ಯವಿಲ್ಲ. ಮಾದರಿ ಶೀಷೆಗಳೊಂದಿಗೆ ಒಂದು ಪತ್ರವನ್ನು ಸಹಾ ಕೊಟ್ಟಿದ್ದರು. ಮಾದರಿ ಶೀಷೆಗಳನ್ನು ಸೀಲ್ ಮಾಡಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಅವುಗಳನ್ನಿಟ್ಟು ಕೊಟ್ಟಿರುತ್ತಾರೆ. ರಾಸಾಯನಿಕ ತಜ್ಞರಿಗೆ ಶೀಷೆಗಳನ್ನು ತಲುಪಿಸಿದ ನಂತರ ಅವರಿಂದ ಸ್ವೀಕೃತಿ ಪಡೆದಿರುತ್ತೇನೆ. ಮಾದರಿ ಶೀಷೆಗಳನ್ನು ತಜ್ಞರಿಂದ ಪರೀಕ್ಷಿಸಿದ ನಂತರ ವಾಪಸ್ಸು ಪಡೆಯುವ ಸಮಯ ನಿರೀಕ್ಷಕರಿಂದ ಯಾವುದೇ ಪತ್ರವನ್ನು ಪಡೆದಿರುವುದಿಲ್ಲ. ರಾಸಾಯನಿಕ ತಜ್ಞರು ನೀಡಿದ ಲಕೋಟೆಯನ್ನು ತೆರೆದು ನೋಡಿಲ್ಲ. ನಾನು ಮಾದರಿ ಶೀಷೆಗಳನ್ನು ಕೊಂಡೊಯ್ಯಲಿಲ್ಲವೆಂದರೆ ಸರಿಯಲ್ಲ ಎಂದು ಸಾಕ್ಷಿ ನೀಡಿರುತ್ತಾರೆ. ಈ ಪಾಟೀ ಸವಾಲಿನಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ಆಗಿರುವುದಿಲ್ಲ.

ಪ್ರಾ.ಸಾ.1, 2 ಹಾಗೂ 3 ಇವರುಗಳು ನೀಡಿರುವ ಹೇಳಿಕೆಯ ಪ್ರಕಾರ ಹಾಗೂ ಜಪ್ತಿಪಡಿಸಲಾಗಿರುವ ಮದ್ಯದ ಮಾದರಿ ಶೀಷೆಗಳು ರಾಸಾಯನಿಕ ತಜ್ಞರ ವರದಿಯಂತೆ ಮದ್ಯವೆಂದು ಸಾಬೀತಾಗಿರುವುದರಿಂದ ದಿನಾಂಕ: 31.8.2001 ರಂದು ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-25 ಎಂ-3792 ರಲ್ಲಿ ಅಕ್ರಮ ಮದ್ಯವು ಸಾಗಣೆಯಾಗಿರುವುದು ಖಚಿತವಾಗಿರುವುದರಿಂದ ಮೊದಲನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಿರುತ್ತೇನೆ.

ಅಕ್ರಮ ಮದ್ಯ ಸಾಗಣೆಯು ತನ್ನ ತಿಳುವಳಿಕೆಗೆ ಬಾರದೇ ನಡೆದಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಜವಾಬ್ದಾರಿಯಾಗಿದ್ದು, ಈ ಬಗ್ಗೆ ವಾಹನ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಈ ಅಪರಾಧವು ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ವಾಹನಕ್ಕೆ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿ ತನ್ನ ತಿಳುವಳಿಕೆಯಿಂದಲೇ ಕೇರಳಕ್ಕೆ ಮದ್ಯವನ್ನು ಸಾಗಣೆ ಮಾಡುತ್ತಿದ್ದುದು ದೃಢಪಟ್ಟಿದ್ದು, ಈ ಬಗ್ಗೆ ಈ ಪ್ರಾಧಿಕಾರವು ಕಾರಣ ಕೇಳಿ ನೀಡಿದ್ದ ನೋಟೀಸು ಸ್ವೀಕೃತಗೊಂಡಿದ್ದು, ಸದ್ರಿ ನೋಟೀಸಿಗೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಅಲ್ಲದೆ ಪ್ರಾಧಿಕಾರದ ಮುಂದೆ ಹಾಜರಾಗಲು ನೀಡಿದ ನೋಟೀಸು ಸ್ವೀಕೃತಗೊಳ್ಳದೆ ಹಿಂದೆ ಬಂದಿದ್ದು, ನೋಟೀಸನ್ನು ಅರ್ಜಿದಾರರ ವಕೀಲರ ಮುಖಾಂತರ ನೀಡಿದ್ದರೂ ಅರ್ಜಿದಾರರು ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಸಾಕ್ಷ್ಯಾಧಾರಗಳನ್ನು ಸಲ್ಲಿಸಿರುವುದಿಲ್ಲ. ಅರ್ಜಿದಾರರ ಪರ ವಕೀಲರಿಗೆ ವಾಹನ ಮಾಲೀಕರ ಪರ ಪ್ರತಿರಕ್ಷಾ ಸಾಕ್ಷಿಯನ್ನು ವಿಚಾರಣೆಗಾಗಿ ಹಾಜರುಪಡಿಸಲು ಕೆಲವು ಅವಕಾಶಗಳನ್ನು ನೀಡಿದ್ದರೂ, ಅರ್ಜಿದಾರರ ಪರ ವಕೀಲರು ವಾಹನ ಮಾಲೀಕರ ಪರ ಪ್ರತಿರಕ್ಷಾ ಸಾಕ್ಷಿಗಳನ್ನು ವಿಚಾರಣೆಗೆ ಹಾಜರುಪಡಿಸಲು ವಿಫಲರಾಗಿರುತ್ತಾರೆ. ಅಲ್ಲದೆ ಮಾನ್ಯ ಸತ್ರ ನ್ಯಾಯಾಲಯವು ಮಧ್ಯಂತರ ಬಿಡುಗಡೆಗಾಗಿ ಈ ಪ್ರಾಧಿಕಾರವು ಬ್ಯಾಂಕ್ ಗ್ಯಾರಂಟಿಯನ್ನು ನೀಡಲು ವಿಧಿಸಿದ್ದ ಷರತ್ತನ್ನು ಪರಿಷ್ಕರಿಸಿ ಇಂಡೆಮ್ನಿಟಿ ಬಾಂಡ್ ಮತ್ತು ಜಾಮೀನಿನ ಮೇಲೆ ವಾಹನವನ್ನು ಮಧ್ಯಂತರ ವಶಕ್ಕೆ ನೀಡಲು ಆದೇಶ ನೀಡಿದ್ದರೂ ವಾಹನ ಮಾಲೀಕರು ವಾಹನವನ್ನು ಮಧ್ಯಂತರ ವಶಕ್ಕೆ ಪಡೆದುಕೊಂಡಿರುವುದಿಲ್ಲ. ಈ ಕಾರಣದಿಂದ ವಾಹನ ಮಾಲೀಕರು ಈ ಅಪರಾಧವನ್ನು ತನ್ನ ತಿಳುವಳಿಕೆಯಿಂದಲೇ ವಾಹನಕ್ಕೆ ನಕಲಿ ಸಂಖ್ಯಾ ಫಲಕವನ್ನು ಅಳವಡಿಸಿ ಅಕ್ರಮ ಮದ್ಯ ಸಾಗಣೆಯಲ್ಲಿ ಭಾಗಿಯಾಗಿರುವುದು ಸಾಬೀತಾಗಿದ್ದು, ಅಲ್ಲದೆ ವಾಹನ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ 2ನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಿಪಡಿಸಲಾಗಿರುವ ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-25 ಎಂ-3792 ನ್ನು (ಅಸಲಿ ಸಂಖ್ಯೆ: ಕೆಎಲ್-02 ಇ-9711) ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದೇ ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ86:ಡಿಟಿಸಿಆರ್:2001-2002, ದಿನಾಂಕ:4ನೇ ನವೆಂಬರ್ 2004**

ಗೋವಿಂದಪ್ಪ, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು 1965ನೇ ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 43(ಎ) ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರ ಮೊಕದ್ದಮೆ ಸಂಖ್ಯೆ: 13/2001-02 ದಿನಾಂಕ: 31.8.2001 ರಲ್ಲಿ ಜಪ್ತಿಪಡಿಸಿರುವ ವಾಹನ ಟಾಟಾ ಸುಮೋ ಸಂಖ್ಯೆ: ಕೆಎ-25 ಎಂ-3792 ನ್ನು (ಅಸಲಿ ಸಂಖ್ಯೆ: ಕೆಎಲ್-02 ಇ-9711 ಇಂಜಿನ್ ಸಂಖ್ಯೆ: 483 ಡಿಎಲ್ 41 ಡಿಎಸ್‌ಕ್ಯೂ 745813, ಚಾಸೀಸ್ ಸಂಖ್ಯೆ: 385003/ಡಿಎಸ್‌ಕ್ಯೂ 977651) ನಿಯಮ 43ಎ (2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 4.11.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ-1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ.:1 - ಶ್ರೀ ಲಕ್ಷ್ಮಣ ಗೌಡ, ಅಬಕಾರಿ ಉಪ ಅಧೀಕ್ಷಕರು.

ಪ್ರಾ.ಸಾ.:2 - ಶ್ರೀ ಮೋಹನ್ ಕುಮಾರ್ ಅಬಕಾರಿ ರಕ್ಷಕರು, ಹಂಪನಕಟ್ಟ ವಲಯ.

ಪ್ರಾ.ಸಾ.:3 - ಶ್ರೀ ಜಾರ್ಜ್ ಪಿಂಟೊ, ಅಬಕಾರಿ ನಿರೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು.

**ಅನುಬಂಧ-2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ-1 - ರಾಸಾಯನಿಕ ವಿಶ್ಲೇಷಕರ ವರದಿ ಪ್ರತಿ.

ನಿಶಾನೆ ಪಿ-2 - ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ ವರದಿಯ ಪ್ರತಿ.

ನಿಶಾನೆ ಪಿ-3 - ಮಹಜರಿನ ಪ್ರತಿ.

ನಿಶಾನೆ ಪಿ-4 - ಪ್ರಥಮ ಮಾಹಿತಿ ವರದಿಯ ಪ್ರತಿ.

ನಿಶಾನೆ ಪಿ-5 - ಸರ್ಚ್ ಲಿಸ್ಟ್.

**ಅನುಬಂಧ-3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ:** ಯಾವುದೂ ಇರುವುದಿಲ್ಲ-

**ಅನುಬಂಧ-4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:**

- ಯಾವುದೂ ಇರುವುದಿಲ್ಲ-

ಪಿ.ಆರ್. 1572 ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:508:ಡಿಟಿಸಿಆರ್:2002-2003 ದಿನಾಂಕ: 2ನೇ ನವೆಂಬರ್ 2004**

**ಉಪಸ್ಥಿತರು** : ಎನ್.ಎಂ. ಹುಸೇನ್,
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:** **ವಿರುದ್ಧ** **ಆರೋಪಿಗಳು:**

ಅಬಕಾರಿ ಉಪ ನಿರೀಕ್ಷಕರು, 1. ಪರಾರಿಯಾಗಿರುತ್ತಾರೆ.
ಪುತ್ತೂರು ಉಪ ವಿಭಾಗ ಪುತ್ತೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 5.03.2003ರಂದು ಪೂರ್ವಾಹ್ನ 4-00 ಗಂಟೆ ಸಮಯದಲ್ಲಿ ಫಿರ್ಯಾದುದಾರರು ತಮ್ಮ ಸಿಬ್ಬಂದಿ ಸಮೇತ ಪುತ್ತೂರು ತಾಲ್ಲೂಕು ಶಿರಾಡಿ ಗ್ರಾಮದ ಅಡ್ಡಹೊಳೆ ಸೇತುವೆಯ ಬಳಿ ಗುಂಡ್ಯ ಅರಣ್ಯ ತನಿಖಾ ಠಾಣೆ ಬಳಿ ರಾಷ್ಟ್ರೀಯ ಹೆದ್ದಾರಿ 48 ರಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ ಬೆಂಗಳೂರು ಕಡೆಯಿಂದ ಮಂಗಳೂರು ಕಡೆಗೆ ಲಾರಿ ಸಂ: ಎಂಇಜಡ್ಜ್-4881 ಅತೀ ವೇಗವಾಗಿ ಬರುವುದನ್ನು ಕಂಡು ಸಂಶಯದ ಮೇರೆಗೆ ಸದರಿ ಲಾರಿಯನ್ನು ನಿಲ್ಲಿಸಲು ಸೂಚನೆ ನೀಡಿದಾಗ ಚಾಲಕನು ಲಾರಿಯನ್ನು ನಿಲ್ಲಿಸದೇ ಅತೀ ವೇಗವಾಗಿ ಓಡಿಸಿದಾಗ ಸಿಬ್ಬಂದಿಗಳು ತಮ್ಮ ಇಲಾಖಾ ಜೀಪಿನಲ್ಲಿ ಬೆನ್ನಟ್ಟಿ, ವಾಹನ ಚಾಲಕನು ಗುಂಡ್ಯ ಅರಣ್ಯ ತನಿಖಾ ಠಾಣೆಯಿಂದ ಸುಮಾರು $1^1/_2$ ಕಿ.ಮೀಟರು ದೂರ ಮಂಗಳೂರು ಕಡೆಗೆ ರಾಷ್ಟ್ರೀಯ ಹೆದ್ದಾರಿ 48ರ ಅಡ್ಡ ಹೊಳೆ ಸೇತುವೆಯಿಂದ 50 ಮೀಟರು ದೂರದಲ್ಲಿ ವಾಹನವನ್ನು ನಿಲ್ಲಿಸಿ ಕತ್ತಲಲ್ಲಿ ಪರಾರಿಯಾಗಿರುತ್ತಾರೆ. ನಂತರ ಸದರಿ ವಾಹನದ ಬಾಡಿಯ ಮೇಲೆ ಹಗ್ಗದಿಂದ ಕಟ್ಟಿದ ಟಾರ್ಪಾಲನ್ನು ಸರಿಸಿ ನೋಡಿದಾಗ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ವಾಹನವನ್ನು ಶೋಧಿಸಲು ನ್ಯಾಯಾಲಯದ ಶೋಧನೆ ವಾರೆಂಟ್ ತರಲು ಅಸಾಧ್ಯವಾದ ಕಾರಣ ಹಾಗೂ ಪಂಚರ ಸಾಕ್ಷಿಗಾಗಿ ಯಾರೂ ದೊರಕದ ಕಾರಣ ಇಲಾಖೆಯವರನ್ನೇ ಸಾಕ್ಷಿಯಾಗಿಟ್ಟುಕೊಂಡು ಅವರ ಸಮಕ್ಷಮ ಸರ್ಚ್ ಮೆಮೋವನ್ನು ತಯಾರಿಸಿ ಸದರಿ ಲಾರಿಯಲ್ಲಿದ್ದ ಸರಕನ್ನು ಪರಿಶೀಲಿಸಿದಾಗ ಅವುಗಳು ಈ ಕೆಳಗಿನಂತಿರುತ್ತವೆ.

| ಕ್ರ. ಸಂ. | ಮದ್ಯದ ವಿವರ | ಪೆಟ್ಟಿಗೆಗಳು | | | | ಲೀಟರುಗಳು |
|---|---|---|---|---|---|---|
| | | 750 ಎಂಎಲ್ | 375 ಎಂಎಲ್ | 180 ಎಂಎಲ್ | 60 ಎಂಎಲ್ | |
| 1. | ಡೈರೆಕ್ಟರ್ ಸ್ಪೆಷಲ್ ವಿಸ್ಕಿ | 160 | 8 | 60 | - | 1940.400 |
| 2. | ಡೈರೆಕ್ಟರ್ ಸ್ಪೆಷಲ್‌ಬಾಸ್ ವಿಸ್ಕಿ | 35 | 4 | 15 | - | 480.600 |
| 3. | ರಾಯಲ್ ಚಾಲೆಂಜ್ ವಿಸ್ಕಿ | 25 | - | 2 | - | 242.280 |
| 4. | ವಿಂಡ್ಸರ್ ರೇರ್ ವಿಸ್ಕಿ | 20 | - | 21 | 20 | 541.440 |

ಸದರಿ ಮೇಲಿನ ಮದ್ಯದಲ್ಲಿ ಒಟ್ಟು 3204.720 ಲೀಟರು ಇದ್ದು ಒಟ್ಟು 360 ರಟ್ಟಿನ ಪೆಟ್ಟಿಗೆಗಳಿರುವುದು ಕಂಡು ಬಂತು. ವಾಹನ ಚಾಲಕನು ಪರಾರಿಯಾಗಿದ್ದು, ಸದರಿ ಮದ್ಯಸಾಗಾಣಿಕೆ ಬಗ್ಗೆ ಯಾವುದೇ ರಹದಾರಿ ಪತ್ರಗಳು ಸಿಕ್ಕಿರುವುದಿಲ್ಲ. ವಾಹನವು ಅಶೋಕ ಲೈಲ್ಯಾಂಡ್ ಲಾರಿಯಾಗಿದ್ದು. ಇದರ ನೊಂದಣಿ ಸಂಖ್ಯೆ: ಎಂಇಜಡ್-4881 ಆಗಿರುತ್ತದೆ. ಸದರಿ ಮೇಲಿನ ಮದ್ಯದಿಂದ ರಾಸಾಯನಿಕ ಪರೀಕ್ಷೆಗಾಗಿ ಪ್ರತಿಯೊಂದು ಬ್ರಾಂಡ್‌ನಿಂದ ತಲಾ ಒಂದೊಂದೇ ಮಾದರಿ ಬಾಟ್ಲಿಗಳನ್ನು ತೆರೆದು ಬಾಟ್ಲಿಗಳ ಬಾಯಿಗೆ ಬಟ್ಟೆದಾರದಿಂದ ಕಟ್ಟಿ ಇಲಾಖಾ ಮೊಹರು ಹಾಗೂ ಮಾದರಿ ಮೊಹರು ತಯಾರಿಸಿ ಮತ್ತು ಮಾದರಿ ಬಾಟ್ಲಿಗಳಿಗೆ ಗುರುತಿನ ಚೀಟಿ ಅಂಟಿಸಿರುತ್ತಾರೆ. ಇದು ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದರಿಂದ ಮದ್ಯ ಹಾಗೂ ಸಾಗಾಣಿಕೆಗಾಗಿ ಬಳಸಿದ ಲಾರಿಯನ್ನು ಮುಂದಿನ ಸೂಕ್ತ ಕ್ರಮಕ್ಕಾಗಿ ವಶಪಡಿಸಿಕೊಂಡು ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ 2/2002-03 ದಿ: 5.3.2003 ರಂತೆ ನೊಂದಾಯಿಸಿ ಮಹಜರನ್ನು ಸ್ಥಳದಲ್ಲಿಯೇ ಬರೆದು ಮುಂದಿನ ಸೂಕ್ತ ಕ್ರಮಕ್ಕಾಗಿ ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 3204.720 ಲೀಟರು ಮದ್ಯದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದಲ್ಲಿ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ ಕಲಂ 43 (ಸಿ) ರನ್ವಯ ಈ ಪ್ರಾಧಿಕಾರದ ಆದೇಶ ಸಂಖ್ಯೆ:ಎಸ್‌ಡಿಕೆ:508:ಡಿಟಿಸಿಆರ್:02-03 ದಿ:20.6.2003 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ನಿರೀಕ್ಷಕರು ಪುತ್ತೂರು ವಲಯ ಇವರಿಗೆ ರಹದಾರಿ ಮೂಲಕ ಮದ್ಯವನ್ನು ವಿಲೇವಾರಿ ಮಾಡಲು ಆದೇಶ ನೀಡಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಪುತ್ತೂರು ವಲಯರವರ ತನಿಖಾ ವರದಿ ಸಂಖ್ಯೆ:45/2003-04 ದಿ:2.10.04 ರಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಎಂಇಜಡ್:4881 ಮಾಲೀಕತ್ವದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮೈಸೂರು ಇವರಿಗೆ ಹಲವಾರು ಬಾರಿ ಪತ್ರ ವ್ಯವಹಾರ ಬರೆಯಲಾಗಿದ್ದು, ಈವರೆಗೆ ಯಾವುದೇ ಉತ್ತರ ಬಂದಿರುವುದಿಲ್ಲ. ಆದುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಕರಣವು ದಾಖಲಾಗಿ ಸುಮಾರು 1 ವರ್ಷ 7 ತಿಂಗಳು ಕಳೆದಿದ್ದರೂ ಯಾವುದೇ ವ್ಯಕ್ತಿಯು ವಾಹನವು ತನ್ನದೆಂದು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮಾಲಿಕತ್ವ ಸಾಬೀತುಪಡಿಸಿ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲವಾದಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸದ್ರಿ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಹಾಜರುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸೊತ್ತುಗಳಾಗಿದ್ದಲ್ಲಿ ಅಂತಹ ವಸ್ತುಗಳನ್ನು ಕಲಂ 43 (ಸಿ) ಅಡಿಯಲ್ಲಿ ಅಕ್ರಮ ಮದ್ಯವನ್ನು ಮತ್ತು ಅಕ್ರಮ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿ: 5.3.2003 ರಂದು ಸದರಿ ಲಾರಿಯಲ್ಲಿ ಅಕ್ರಮವಾಗಿ 3204.720 ಲೀಟರು ಮದ್ಯವನ್ನು ಸಾಗಾಣಿಕೆ ಮಾಡುತ್ತಿರುವುದನ್ನು ಅಬಕಾರಿ ಉಪ ಅಧೀಕ್ಷಕರು ಪುತ್ತೂರು ಉಪ ವಿಭಾಗ, ಪುತ್ತೂರು ಇವರು ಪತ್ತೆ ಹಚ್ಚಿ ಸ್ಥಳ ಮಹಜರಿನೊಂದಿಗೆ ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಲಾಗಿದ್ದ ವಾಹನವನ್ನು ಜಪ್ತಿಪಡಿಸಿರುತ್ತಾರೆ. ಜಪ್ತಿಪಡಿಸಿರುವ ಮದ್ಯವು ರಾಸಾಯನಿಕ ತಜ್ಞರ ಪ್ರಕಾರ ಮದ್ಯವೆಂದು ಧೃಢಪಟ್ಟಿರುತ್ತದೆ. ಈ ಮೇಲಿನ ಹಿನ್ನೆಲೆಯಲ್ಲಿ ಪರಾರಿಯಾಗಿರುವ ಆರೋಪಿಯು ಕಾನೂನು ಬಾಹಿರ ಕೃತ್ಯವನ್ನು ಎಸಗಿರುವುದು ಹಾಗೂ ಅಕ್ರಮ ಮದ್ಯ ಸಾಗಾಣಿಕೆ ಬಗ್ಗೆ ವಾಹನವನ್ನು ಬಳಸಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಸಾಬೀತಾಗಿರುತ್ತದೆ. ಮತ್ತು ಅಕ್ರಮ ಮದ್ಯ ಸಾಗಾಣಿಕೆಯಾಗಿರುವುದು ಸ್ಪಷ್ಟವಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸದರಿ ಪ್ರಕರಣದಲ್ಲಿ ವಾಹನವನ್ನು ಜಪ್ತಿಪಡಿಸಿ ಸುಮಾರು 1 ವರ್ಷ 7 ತಿಂಗಳು ಕಳೆದಿದ್ದರೂ, ಸದರಿ ಸೊತ್ತುಗಳಿಗೆ ಯಾವುದೇ ವ್ಯಕ್ತಿಯೂ ಈ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಈ ಕೃತ್ಯವು ವಾಹನ ಮಾಲೀಕರ ತಿಳುವಳಿಕೆಯಿಂದಲೇ ನಡೆದಿದೆ ಎಂದು ಭಾವಿಸಬಹುದಾಗಿದೆ. ಜಪ್ತಿಪಡಿಸಿದ ಲಾರಿಯನ್ನು ತೆರೆದ ಜಾಗದಲ್ಲಿಯೇ ಇಟ್ಟಿರುವುದರಿಂದ ಮಳೆ ಬಿಸಿಲು ಮುಂತಾದ ಹವಾಮಾನ ವೈಪರೀತ್ಯದಿಂದ ವಾಹನವು ದಿನೇ ದಿನೇ ತನ್ನ ಗುಣಮಟ್ಟವನ್ನು ಕಳೆದುಕೊಳ್ಳುವ ಹಾಗೂ ಹಾಳಾಗುವ ಸಾಧ್ಯತೆಯಿರುವುದರಿಂದ ಹಾಗೂ ಸರ್ಕಾರದ ಆದಾಯದ ಹಿತದೃಷ್ಟಿಯಿಂದ ವಶಪಡಿಸಿಕೊಂಡ ಲಾರಿ ಸಂ:ಎಂಇಜಡ್-4881 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ಎನ್.ಎಂ. ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ರನ್ವಯ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಕಲಂ 43 (ಸಿ) ರನ್ವಯ ಅಬಕಾರಿ ಉಪ ಅಧೀಕ್ಷಕರು, ಪುತ್ತೂರು ಉಪ ವಿಭಾಗ, ಪುತ್ತೂರು ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: 2/02-03 ದಿನಾಂಕ: 5.3.2003 ರಂದು ವಶಪಡಿಸಿಕೊಂಡಿರುವ ವಾಹನ ಲಾರಿ ಸಂಖ್ಯೆ: ಎಂಇಜಡ್-4881 ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿ: 2.11.2004 ರಂದು ಉತ್ತಲೇಖಿನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**

ಪಿ.ಆರ್. 1573 ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.